## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು

### ಅಂತಿಮ ಅಧಿಸೂಚನೆ

**ಸಂಖ್ಯೆ: ಕೆಎಸ್ಎ/ಸಿಆರ್-8/97-98, ದಿನಾಂಕ: 5ನೇ ಜುಲೈ, 2004**

ಸಂಖ್ಯೆ:ಕೆಎಸ್ಎ:ಸಿಆರ್:8:97-98, ದಿನಾಂಕ: 20.08.1997ರ ಪ್ರಿಲಿಮಿನರಿ ಅಧಿಸೂಚನೆಯನ್ನು ದಿನಾಂಕ: 30.08.1997ರ ಕರ್ನಾಟಕ ರಾಜ್ಯ ಪತ್ರದ ವಿಶೇಷ ಸಂಚಿಕೆಯಲ್ಲಿ ಪ್ರಕಟಿಸಿ ಅದರಲ್ಲಿ ಸದರಿ ಅಧಿಸೂಚನೆಯ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಗೊರಗುಂಟೆ ಪಾಳ್ಯದ ಹೆಚ್.ಟಿ.ಸಿ. ಲೇನ್ ಕೆಳಗಿನ ಕೊಳಚೆ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶಗಳ (ನಿರ್ಮೂಲನ ಮತ್ತು ಅಭಿವೃದ್ಧಿ) ಕಾಯ್ದೆ 1973ರ ಸೆಕ್ಷನ್ 3ರಡಿಯಲ್ಲಿ ಪ್ರಾರಂಭಿಕವಾಗಿ ಕೊಳಚೆ ಪ್ರದೇಶವೆಂದು ಘೋಷಿಸಿ ಸಂಬಂಧಿಸಿದವರಿಂದ ಆಕ್ಷೇಪಣೆಗಳನ್ನು ಆಹ್ವಾನಿಸಲಾಗಿತ್ತು.

ಸದರಿ ಅಧಿಸೂಚನೆಗೆ ಯಾರಿಂದಲೂ ಆಕ್ಷೇಪಣೆಗಳು ಬಂದಿಲ್ಲ. ಪ್ರಕರಣದ ಬಗ್ಗೆ ದಿನಾಂಕ:30.06.2004ರಂದು ಸ್ಥಳ ತನಿಖೆ ನಡೆಸಲಾಗಿದೆ. ಹಾಲಿ ಇರುವ ಗುಡಿಸಲುಗಳು ದುರಸ್ತಿ ಇಲ್ಲದೆ ಸರಿಯಾದ ಮೂಲಭೂತ ಸೌಕರ್ಯಗಳಿಲ್ಲದ ಕಾರಣ ಅನಾರೋಗ್ಯ ವಾತಾವರಣದಿಂದ ಕೂಡಿ ಬಂದಿರುವುದು ಕಂಡು ಬಂದಿದೆ.

ಆದ್ದರಿಂದ, ಮೇಲ್ಕಂಡ ಎಲ್ಲಾ ಕಾರಣಗಳಿಂದ ಈ ಕೆಳಗೆ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರದೇಶವನ್ನು ಕರ್ನಾಟಕ ಕೊಳಚೆ ನಿರ್ಮೂಲನಾ (ಅಭಿವೃದ್ಧಿ ಮತ್ತು ನಿರ್ಮೂಲನಾ) ಕಾಯಿದೆ 1973ರ (ಕರ್ನಾಟಕ ಆಕ್ಟ್ 33 1971ರಂತೆ) ಕಲಂ 3ರ ಪ್ರಕಾರ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಹೆಚ್.ಯು.ಡಿ. 46.ಎಂ.ಸಿ.ಎಸ್.17 ದಿನಾಂಕ: 17.04.1986ರ ಪ್ರಕಾರ ಜಿಲ್ಲಾಧಿಕಾರಿಯವರಿಗೆ ದತ್ತವಾಗಿರುವ ಅಧಿಕಾರದಂತೆ ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು, ರವರು ಅಂತಿಮವಾಗಿ ಕೊಳಚೆ ಪ್ರದೇಶವೆಂದು ಘೋಷಣೆ ಹೊರಡಿಸಲಾಗಿದೆ.

**ಷೆಡ್ಯೂಲ್**

ಬೆಂಗಳೂರು ನಗರದ ಪರಿಮಿತಿಯಲ್ಲಿರುವ ಗೊರಗುಂಟೆ ಪಾಳ್ಯ ಕೊಳಚೆ ಪ್ರದೇಶದ ಚಕ್ಕುಬಂದಿ ಮತ್ತು ಹದ್ದುಬಸ್ತು ತಃಖ್ತೆ:

| ಕ್ರ. ಸಂ. | ಕೊಳಚೆ ಪ್ರದೇಶದ ಹೆಸರು ಮತ್ತು ಸ್ಥಳ | ಮಾಲಿಕರ ಹೆಸರು | ಸರ್ವೆ ನಂ. | ವಿಸ್ತೀರ್ಣ | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ |
|---|---|---|---|---|---|---|---|---|
| 1. | ಗೊರಗುಂಟೆಪಾಳ್ಯ ಹೆಚ್.ಟಿ.ಸಿ. ಲೇನ್ ಕೊಳಚೆ ಪ್ರದೇಶ | ಬಿ.ಡಿ.ಎ. | - | 2.29 | ಫ್ಯಾಕ್ಟರಿ ಮತ್ತು ಚರಂಡಿ | ಜೆ.ಸಿ. ಎಕ್ಸ್ ಪೋರ್ಟ್ | ಎಸ್.ಎಂ. ಬಿ. ಕ್ರಾಸ್ ರಸ್ತೆ | ಚಕ್ಷಿಣ ರಬ್ಬರ್ ಫ್ಯಾಕ್ಟರಿ |

ಜಿಲ್ಲಾಧಿಕಾರಿಗಳು,
ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು.

ಪಿ.ಆರ್. 1060

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

### ಅಂತಿಮ ಅಧಿಸೂಚನೆ

**ಸಂಖ್ಯೆ: ಕೆಎಸ್ಎ/ಸಿಆರ್-11/94-95, ದಿನಾಂಕ: 5ನೇ ಜುಲೈ, 2004**

ಸಂಖ್ಯೆ:ಕೆಎಸ್ಎ:ಸಿಆರ್:11:94-95, ದಿನಾಂಕ: 08.07.1994ರ ಪ್ರಿಲಿಮಿನರಿ ಅಧಿಸೂಚನೆಯನ್ನು ದಿನಾಂಕ: 23.07.1994ರ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಿ ಅದರಲ್ಲಿ ಸದರಿ ಅಧಿಸೂಚನೆಯ ಷೆಡ್ಯೂಲ್‌ನಲ್ಲಿರುವ ಸಹಾಯ ಹಳ್ಳಿಯ ಇಂದಿರಾಪುರಂ ಕೊಳಚೆ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶಗಳ (ನಿರ್ಮೂಲನ ಮತ್ತು ಅಭಿವೃದ್ಧಿ) ಕಾಯ್ದೆ 1973ರ ಸೆಕ್ಷನ್ 3ರಡಿಯಲ್ಲಿ ಪ್ರಾರಂಭಿಕವಾಗಿ ಕೊಳಚೆ ಪ್ರದೇಶವೆಂದು ಘೋಷಿಸಿ ಸಂಬಂಧಿಸಿದವರಿಂದ ಆಕ್ಷೇಪಣೆಗಳನ್ನು ಆಹ್ವಾನಿಸಲಾಗಿತ್ತು.

ಸದರಿ ಅಧಿಸೂಚನೆಗೆ ಯಾರಿಂದಲೂ ಆಕ್ಷೇಪಣೆಗಳು ಬಂದಿಲ್ಲ. ಪ್ರಕರಣದ ಬಗ್ಗೆ ದಿನಾಂಕ:30.06.2004ರಂದು ಸ್ಥಳ ತನಿಖೆ ನಡೆಸಲಾಗಿದೆ. ಸದರಿ ಪ್ರದೇಶದ ನಿವಾಸಿಗಳು ಅಧಿಸೂಚಿತ ಪ್ರದೇಶವನ್ನು ಕೊಳಚೆ ಪ್ರದೇಶವೆಂದು ಘೋಷಿಸಿ ಸಾರ್ವಜನಿಕ ಮೂಲಭೂತ ಸೌಲಭ್ಯಗಳ ಕೊರತೆ ಇರುವುದರಿಂದ ಮತ್ತು ಈ ಪ್ರದೇಶಗಳು ತಗ್ಗಾದ ಪ್ರದೇಶದಲ್ಲಿದ್ದು ಜನಸಂದಣಿಯಿಂದ ಕೂಡಿದ್ದು ಮಾಲಿನ್ಯ ಮತ್ತು ಅನಾರೋಗ್ಯ ವಾತಾವರಣ ಮುಂದುವರೆದಿರುವುದರಿಂದ ಹಾಗೂ ಮೂಲಭೂತ ಸೌಲಭ್ಯಗಳಾದ ಕುಡಿಯುವ ನೀರು, ರಸ್ತೆ, ಚರಂಡಿ ಹಾಗೂ ಶೌಚಗೃಹ ಇತ್ಯಾದಿಗಳ ಅವಶ್ಯಕತೆಯನ್ನು ಸಂಬಂಧಪಟ್ಟ ನಗರಸಭೆಯಿಂದ ವ್ಯವಸ್ಥೆಯಾಗಿಲ್ಲದಿರುವುದರಿಂದ ಈ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶ (ಅಭಿವೃದ್ಧಿ ಮತ್ತು ನಿರ್ಮೂಲನೆ) ಅಧಿನಿಯಮ 1973ರ ಕಲಂ 3ರಂತೆ ನನಗೆ ದತ್ತವಾಗಿರುವ ಅಧಿಕಾರದಂತೆ ಕೆಳಗೆ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರದೇಶವನ್ನು ಕೊಳಚೆ ಪ್ರದೇಶವೆಂದು ಅಂತಿಮವಾಗಿ ಘೋಷಿಸಿದೆ.

**ಷೆಡ್ಯೂಲ್**

ಬೆಂಗಳೂರು ನಗರದ ಪರಿಮಿತಿಯಲ್ಲಿರುವ ದೇವರಜೀವನಹಳ್ಳಿ ಸ.ನಂ. 24ರಲ್ಲಿರುವ (ಇಂದಿರಾನಗರ ಸಹಾಯ ಹಳ್ಳಿ) ಕುಷ್ಟರೋಗಿ ಕೊಳಚೆ ಪ್ರದೇಶದ ಚಕ್ಕುಬಂದಿ ಮತ್ತು ಹದ್ದುಬಸ್ತು ತಃಖ್ತೆ:

| ಕ್ರ. ಸಂ. | ಕೊಳಚೆ ಪ್ರದೇಶದ ಹೆಸರು ಮತ್ತು ಸ್ಥಳ | ಮಾಲಿಕರ ಹೆಸರು | ಸರ್ವೆ ನಂ. | ವಿಸ್ತೀರ್ಣ | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ |
|---|---|---|---|---|---|---|---|---|
| 1. | ದೇವರಜೀವನ ಹಳ್ಳಿ ಸ.ನಂ.24 ರಲ್ಲಿರುವ (ಸಹಾಯ ಹಳ್ಳಿ ಕುಷ್ಟರೋಗಿ) ಕೊಳಚೆ ಪ್ರದೇಶ. | 1. ಎಂ.ಅಬ್ದುಲ್ ಖುದ್ದೂಸ್ ಬಿನ್ ಮೋದಿ ಅಬ್ದುಲ್ಲಾ ಸಾಹೇಬ<br>2. ಮೇದಿ ಜೀಯಾವುಲ್ಲಾ ಉ:ಪಾಷಾ | 24 | 1.15 | ಸ.ನಂ.24 ರ ಉಳಿಕೆ ಜಮೀನು | ಮದೀನ ಮೊಹಲ್ಲಾ ಸ.ನಂ.24ರ ಉಳಿಕೆ ಜಾಗ | ಮದೀನ ಮೊಹಲ್ಲಾ ಸ.ನಂ.24 ಉಳಿಕೆ ಜಮೀನು | ಹಳ್ಳಿ |

ಜಿಲ್ಲಾಧಿಕಾರಿಗಳು,
ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು.

ಪಿ.ಆರ್. 1061

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರುನಗರ ಜಿಲ್ಲೆ, ಬೆಂಗಳೂರು

### ಪ್ರಾರಂಭಿಕ ಅಧಿಸೂಚನೆ

**ಸಂಖ್ಯೆ: ಕೆಎಸ್ಎ/ಸಿಆರ್-17/2000-01, ದಿನಾಂಕ: 5ನೇ ಜುಲೈ, 2004**

ಸಂಖ್ಯೆ:ಕೆಎಸ್ಎ:ಸಿಆರ್:17:2000-01, ದಿನಾಂಕ: 17.08.2000ರಂದು ಪ್ರಾರಂಭಿಕವಾಗಿ ಕೊಳಚೆ ಪ್ರದೇಶವೆಂದು ಘೋಷಿಸಿ ಅಧಿಸೂಚನೆ ಹೊರಡಿಸಲಾಗಿತ್ತು.

ಈ ಪ್ರದೇಶದ ಬಗ್ಗೆ ಸಲ್ಲಿಸಲಾದ ಆಕ್ಷೇಪಣೆಗಳನ್ನು ಪರಿಶೀಲಿಸಿದ ನಂತರ ಈ ಪ್ರದೇಶವನ್ನು ಅಂತಿಮವಾಗಿ ದಿನಾಂಕ:04.09.01ರಂದು ಕೊಳಚೆ ಪ್ರದೇಶವೆಂದು ಅಂತಿಮವಾಗಿ ಘೋಷಿಸಿ ಅಧಿಸೂಚನೆ ಹೊರಡಿಸಿದೆ. ಈ ಅಂತಿಮ ಅಧಿಸೂಚನೆಯಲ್ಲಿ ಈ ಪ್ರದೇಶದಲ್ಲಿನ ನಿವಾಸಿಗಳನ್ನು ಬೇರೆ ಕಡೆ ಸ್ಥಳಾಂತರಿಸಬೇಕಾಗಿದ್ದು ಇದಕ್ಕೆ ಈ ಪ್ರದೇಶವನ್ನು ಅಧಿನಿಯಮ 11ರ ಅಡಿಯಲ್ಲಿ ಕ್ರಮ ಜರುಗಿಸುವಂತೆ ತಿಳಿಸಲಾಗಿತ್ತು. ಈ ಪ್ರದೇಶವನ್ನು ದಿನಾಂಕ:30.06.04ರಂದು ಮಂಡಳಿಯ ಅಧಿಕಾರಿಗಳೊಂದಿಗೆ ಸ್ಥಳ ತನಿಖೆ ಮಾಡಿದೆ. ಸ್ಥಳೀಯವಾಗಿ ವಿಚಾರಿಸಲಾಗಿ ಇಲ್ಲಿನ ನಿವಾಸಿಗಳು 30 ವರ್ಷಗಳಿಗಿಂತಲೂ ಹೆಚ್ಚು ಸಮಯದಿಂದ ಈ ಜಾಗದಲ್ಲಿ ವಾಸಿಸುತ್ತಿರುವುದಾಗಿ ತಿಳಿಸಿರುತ್ತಾರೆ. ಈ ನಿವಾಸಿಗಳು ಬೇರೆ ಕಡೆಗೆ ಸ್ಥಳಾಂತರಗೊಳ್ಳಲು ಒಪ್ಪಿಗೆಯನ್ನು ಸೂಚಿಸಿರುತ್ತಾರೆ. ಆದ್ದರಿಂದ ಈ ಕೆಳಕಂಡ ಷೆಡ್ಯೂಲ್‌ನಲ್ಲಿರುವ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶಗಳ (ನಿರ್ಮೂಲನೆ ಮತ್ತು ಅಭಿವೃದ್ಧಿ) ಕಾಯ್ದೆ 1973ರ ಸೆಕ್ಷನ್ 11ರಡಿಯಲ್ಲಿ ಪ್ರಾರಂಭಿಕವಾಗಿ ಕೊಳಚೆ ನಿರ್ಮೂಲನಾ ಪ್ರದೇಶವೆಂದು ಘೋಷಿಸುವುದು ಸೂಕ್ತವೆಂದು ನಿರ್ಧರಿಸಿದ್ದು ಅದರಂತೆ ಕರ್ನಾಟಕ ಕೊಳಚೆ ಪ್ರದೇಶಗಳು (ನಿರ್ಮೂಲನೆ ಮತ್ತು ಅಭಿವೃದ್ಧಿ) ಕಾಯಿದೆ 1973ರ ಸೆಕ್ಷನ್ 11ರಡಿ ದತ್ತವಾಗಿರುವ ಅಧಿಕಾರದಂತೆ ಈ ಕೆಳಕಂಡ ಷೆಡ್ಯೂಲ್‌ನಲ್ಲಿರುವ ಪ್ರದೇಶವೆಂದು ಮೇಲ್ಕಂಡ ಕಾಯ್ದೆಯ 11ರಡಿಯಲ್ಲಿ ಪ್ರಾರಂಭಿಕವಾಗಿ ಕೊಳಚೆ ನಿರ್ಮೂಲನಾ ಪ್ರದೇಶವೆಂದು ಘೋಷಿಸಿದೆ.

ಈ ಪ್ರಾರಂಭಿಕ ಅಧಿಸೂಚನೆ ರಾಜ್ಯಪತ್ರದಲ್ಲಿ ಪ್ರಕಟಗೊಂಡ 15 ದಿವಸಗಳೊಳಗಾಗಿ ಈ ಬಗ್ಗೆ ಆಕ್ಷೇಪಣೆಗಳೇನಾದರೂ ಇದ್ದಲ್ಲಿ ಜಿಲ್ಲಾಧಿಕಾರಿಗಳು ಬೆಂಗಳೂರು ನಗರ ಜಿಲ್ಲೆ ರವರಿಗೆ ಸಲ್ಲಿಸಲು ತಿಳಿಸಿದೆ.

**ಷೆಡ್ಯೂಲ್**

ಬೆಂಗಳೂರು ನಗರ ವ್ಯಾಪ್ತಿಯ ಕಂಟೋನ್‌ಮೆಂಟ್ ರೈಲ್ವೆ ನಿಲ್ದಾಣಕ್ಕೆ ಲಗತ್ತಾಗಿರುವ ಬೆಂಗಳೂರು-ಮದ್ರಾಸ್, ರೈಲ್ವೆ ಲೇನ್ ಪಕ್ಕದಲ್ಲಿರುವ ನೇತಾಜಿ ಕೊಳಚೆ ಪ್ರದೇಶದ ವಿವರ ಮತ್ತು ಚಕ್ಕುಬಂದಿ ಮತ್ತು ಹದ್ದುಬಸ್ತು ತಃಖ್ತೆ:

| ಕ್ರ. ಸಂ. | ಕೊಳಚೆ ಪ್ರದೇಶದ ಹೆಸರು ಮತ್ತು ಸ್ಥಳ | ಮಾಲಿಕರ ಹೆಸರು | ಸರ್ವೆ ನಂ. | ವಿಸ್ತೀರ್ಣ | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ |
|---|---|---|---|---|---|---|---|---|
| 1. | ಬೆಂಗಳೂರು ಶಿವಾಜಿನಗರದ ಕಂಟೋನ್ಮೆಂಟ್ ರೈಲ್ವೆ ನಿಲ್ದಾಣಕ್ಕೆ ಲಗತ್ತಾಗಿರುವ ನೇತಾಜಿ ಕೊಳಚೆ ಪ್ರದೇಶ. | ದಕ್ಷಿಣ ರೈಲ್ವೆ | ಸಿಟಿ ಎಸ್ 1029 | 0.04 | ನೇತಾಜಿ ರಸ್ತೆ | ಮದ್ರಾಸ್‌ಗೆ ಹೋಗುವ ರೈಲ್ವೆ ಲೇನ್ | ರೈಲ್ವೆ ಸೊತ್ತು | ರೈಲ್ವೆ ಸೊತ್ತು |

ಜಿಲ್ಲಾಧಿಕಾರಿಗಳು,
ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು.

ಪಿ.ಆರ್. 1062

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರುನಗರ ಜಿಲ್ಲೆ, ಬೆಂಗಳೂರು

### ಅಂತಿಮ ಅಧಿಸೂಚನೆ

**ಸಂಖ್ಯೆ: ಕೆಎಸ್ಎ/ಸಿಆರ್-23/94-95, ದಿನಾಂಕ: 5ನೇ ಜುಲೈ, 2004**

ಬೆಂಗಳೂರು ನಗರ ವ್ಯಾಪ್ತಿಯಲ್ಲಿರುವ ಈ ಕೆಳಕಂಡ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನಾ) ಕಾಯಿದೆ 1973ರ ಅಧಿನಿಯಮ 3ರ ಪ್ರಕಾರ ಪ್ರಾರಂಭಿಕವಾಗಿ ದಿನಾಂಕ:03.09.94ರಂದು ಘೋಷಿಸಿ, ಈ ಬಗ್ಗೆ ಆಕ್ಷೇಪಣೆಗಳನ್ನು ಸಲ್ಲಿಸಲು ಅವಕಾಶ ನೀಡಲಾಗಿತ್ತು.

ಈ ಪ್ರದೇಶದ ಅಧಿಸೂಚನೆ ಬಗ್ಗೆ ಈ ವರೆವಿಗೂ ಯಾವುದೇ ಆಕ್ಷೇಪಣೆ ಬಂದಿರುವುದಿಲ್ಲ.

ಈ ಪ್ರದೇಶವನ್ನು ದಿನಾಂಕ:30.06.2004ರಂದು ಮಂಡಳಿಯ ಅಧಿಕಾರಿಗಳೊಂದಿಗೆ ಸ್ಥಳ ತನಿಖೆ ಮಾಡಲಾಗಿದ್ದು ಈ ಪ್ರದೇಶವು ಕೊಳಚೆ ಪ್ರದೇಶದ ಗುಣ ಲಕ್ಷಣಗಳು ಮುಂದುವರೆದಿರುವುದರಿಂದ ಈ ಪ್ರದೇಶವನ್ನು ಅಧಿನಿಯಮ 3ರಂತೆ ಅಂತಿಮವಾಗಿ ಘೋಷಿಸಲು ತೀರ್ಮಾನಿಸಲಾಗಿದೆ.

ಆದ್ದರಿಂದ ಕರ್ನಾಟಕ ಕೊಳಚೆ ಪ್ರದೇಶಗಳ (ನಿರ್ಮೂಲನೆ ಮತ್ತು ಅಭಿವೃದ್ಧಿ) ಕಾಯ್ದೆ 1973 ಸೆಕ್ಷನ್ 3 ರಡಿ ದತ್ತವಾಗಿರುವ ಅಧಿಕಾರದಂತೆ ಈ ಕೆಳಕಂಡ ಷೆಡ್ಯೂಲ್ ನಲ್ಲಿರುವ ಪ್ರದೇಶವನ್ನು ಮೇಲ್ಕಂಡ ಕಾಯ್ದೆ ಅಧಿನಿಯಮ 3 ರಡಿಯಲ್ಲಿ ಅಂತಿಮವಾಗಿ ಕೊಳಚೆ ಪ್ರದೇಶವೆಂದು ಘೋಷಿಸಿದೆ.

**ಷೆಡ್ಯೂಲ್**

ಬೆಂಗಳೂರು ನಗರ ಪರಿಮಿತಿಯಲ್ಲಿರುವ ತಣ್ಣೀರಿನಹಳ್ಳಿ ರಾಮ ಸ.ನಂ.81/1, 81/2, ಹಾಗೂ 7/7 ರಲ್ಲಿರುವ ಮುನೇಶ್ವರ ನಗರ ಕೊಳಚೆ ಪ್ರದೇಶದ ಚಕ್ಕುಬಂದಿ ಮತ್ತು ಹದ್ದುಬಸ್ತು ತಃಖ್ತೆ.

| ಕ್ರ. ಸಂ. | ಕೊಳಚೆ ಪ್ರದೇಶದ ಹೆಸರು ಮತ್ತು ಸ್ಥಳ | ಮಾಲಿಕರ ಹೆಸರು | ಸರ್ವೆ ನಂ. | ವಿಸ್ತೀರ್ಣ | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ |
|---|---|---|---|---|---|---|---|---|
| 1. | ಯಶವಂತಪುರ ಹೋಬಳಿ ತಣ್ಣೀರಿನಹಳ್ಳಿ ಗ್ರಾಮದ ಮುನೇಶ್ವರ ನಗರ ಕೊಳಚೆ ಪ್ರದೇಶ | 1. ಪಿಳ್ಳಪ್ಪ ಬಿನ್ ತಮ್ಮಣ್ಣ<br>2. ರಾಮಯ್ಯ ಬಿನ್ ಮುನಿಯಪ್ಪ<br>3. ನಂಜಪ್ಪ ಬಿನ್ ಮುನಿತಮ್ಮಣ್ಣ<br>4. ಮುನಿಶಾಮಪ್ಪ ಅಕ್ಕಪ್ಪ<br>5. ಮೈಸೂರು ಕಮರ್ಷಿಯಲ್ ಯೂನಿಯನ್ ಲಿಮಿಟೆಡ್ | 81/1 | 0-18 | ಸ.ನಂ. 86 | 7/6 76/3 ಇಂಡಸ್ಟ್ರಿಯಲ್ ಷೆಡ್ | 7/6 ಮತ್ತು 81/6ರ ಉಳಿಕೆ ಜಾಗ | 81/2 ರಲ್ಲಿನ ಉಳಿಕೆ ಜಾಗ ಸ.ನಂ.76/3 ರ ಪ್ಲೈವುಡ್ ಫ್ಯಾಕ್ಟರಿ. |
| | | 1. ಮೈಸೂರು ಕಮರ್ಷಿಯಲ್ ಯೂನಿಯನ್ ಲಿಮಿಟೆಡ್ | 81/2 | 0-20 | | | | |
| | | 2. ಎಲ್.ಐ.ಸಿ. | | | | | | |
| | | 3. ಚನ್ನಪ್ಪ ಬಿನ್ ಮುನಿವೆಂಕಟಪ್ಪ | 7/7 | 0-16 | ಸ.ನಂ. 81/1, 81/2 | ಸ.ನಂ. 7/6 | ಸ.ನಂ. 7/7ರ ಉಳಿಕೆ ಜಾಗ | ಸ.ನಂ. 76/3 |

ಜಿಲ್ಲಾಧಿಕಾರಿಗಳು,
ಪಿ.ಆರ್. 1063 ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು.

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು
## ಪ್ರಿಲಿಮಿನರಿ ಅಧಿಸೂಚನೆ
### ಸಂಖ್ಯೆ: ಕೆಎಸ್‌ಎ/ಸಿಆರ್-74/2002-03, ದಿನಾಂಕ: 5ನೇ ಜುಲೈ, 2004

ಬೆಂಗಳೂರು ನಗರ ಕಾರ್ಪೊರೇಷನ್ ವ್ಯಾಪ್ತಿಯ ಈ ಕೆಳಕಂಡ ಷೆಡ್ಯೂಲ್‌ನಲ್ಲಿರುವ ಪ್ರದೇಶದಲ್ಲಿ ಇರುವ ಮನೆಗಳು ಒತ್ತೊತ್ತಾಗಿದ್ದು ಜನರು ಸಾಮಾನ್ಯ ಸ್ಥಿತಿಯಲ್ಲಿ ವಾಸಿಸಲು ಅನಾನುಕೂಲ ಉಂಟಾಗಿದ್ದು, ರಸ್ತೆಗಳು ಅತ್ಯಂತ ಕಿರಿದಾಗಿ ವ್ಯವಸ್ಥಿತವಾಗಿರುವುದಿಲ್ಲ. ಹಾಗೂ ಈ ಪ್ರದೇಶವು ಹೆಚ್ಚಿನ ಜನಸಾಂದ್ರತೆಯಿಂದ ಕೂಡಿದ್ದು ಮಾಲಿನ್ಯ ಹಾಗೂ ಅನಾರೋಗ್ಯಕರ ವಾತಾವರಣದಿಂದ ಕೂಡಿರುವುದರಿಂದ ಈ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶಗಳ (ನಿರ್ಮೂಲನ ಮತ್ತು ಅಭಿವೃದ್ಧಿ) ಕಾಯ್ದೆ 1973ರ ಸೆಕ್ಷನ್ 3ರಡಿಯಲ್ಲಿ ಕೊಳಚೆ ಪ್ರದೇಶವೆಂದು ಘೋಷಿಸುವುದು ಅವಶ್ಯವೆಂದು ಕಂಡು ಬಂದಿರುತ್ತದೆ.

ಆದ್ದರಿಂದ, ಈ ಕೆಳಕಂಡ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶಗಳ (ನಿರ್ಮೂಲನೆ ಮತ್ತು ಅಭಿವೃದ್ಧಿ) ಕಾಯ್ದೆ 1973ರ ಪ್ರಕಾರ ಹಾಗೂ ಜಿಲ್ಲಾಧಿಕಾರಿಯವರಿಗೆ ದತ್ತವಾಗಿರುವ ಅಧಿಕಾರದಂತೆ ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ರವರು ಕೊಳಚೆ ಪ್ರದೇಶವೆಂದು ಘೋಷಿಸಲು ನಿರ್ಧರಿಸಿರುತ್ತಾರೆ.

ಮೇಲ್ಕಂಡ ಈ ಕ್ರಮದ ಬಗ್ಗೆ ಆಕ್ಷೇಪಣೆಗಳೇನಾದರೂ ಇದ್ದಲ್ಲಿ ಜಿಲ್ಲಾದಿಕಾರಿಗಳು, ಬೆಂಗಳೂರು ಜಿಲ್ಲೆ, ಬೆಂಗಳೂರು ಮತ್ತು ಆಯುಕ್ತರು, ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿ, ಶೇಷಾದ್ರಿಪುರಂ, ಬೆಂಗಳೂರು-20 ರವರಿಗೆ ಈ ಅಧಿಸೂಚನೆಯು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ ಹದಿನೈದು (15) ದಿವಸಗಳ ಒಳಗಾಗಿ ಲಿಖಿತವಾಗಿ ಆಕ್ಷೇಪಣೆಗಳನ್ನು ಸಲ್ಲಿಸಲು ಕಾಲಾವಕಾಶ ನೀಡಲಾಗಿದೆ. ನಂತರ ಬಂದ ಆಕ್ಷೇಪಣೆಗಳನ್ನು ಪರಿಗಣಿಸಲಾಗುವುದಿಲ್ಲ.

**ಷೆಡ್ಯೂಲ್**

ಬೆಂಗಳೂರು ನಗರ ಕಾರ್ಪೊರೇಷನ್ ವ್ಯಾಪ್ತಿಯ ದೇಶಿಯಾ ನಗರ ಕೊಳಚೆ ಪ್ರದೇಶದ ಚಕ್ಕುಬಂದಿ ಮತ್ತು ಹದ್ದುಬಸ್ತು ತಃಖ್ತೆ:

| ಕ್ರ. ಸಂ. | ಕೊಳಚೆ ಪ್ರದೇಶದ ಹೆಸರು ಮತ್ತು ಸ್ಥಳ | ಮಾಲಿಕರ ಹೆಸರು | ಸರ್ವೆ ನಂ. | ವಿಸ್ತೀರ್ಣ | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ |
|---|---|---|---|---|---|---|---|---|
| 1. | ದೇಶಿಯಾ ನಗರ ಕೊಳಚೆ ಪ್ರದೇಶ ಲಾಜರ್ ರಸ್ತೆ, ಫ್ರೇಜರ್ ಟೌನ್, ಬೆಂಗಳೂರು. | ಬೆಂಗಳೂರು ನಗರಸಭೆ ರುದ್ರಭೂಮಿ | ಸಿಟಿಎಸ್ ಸಂ. 959ರ ಪೈಕಿ | 1581.25 ಚಮೀ ಅಥವಾ 0.15 ಗುಂಟೆ | ಲಾಜರ್ ರಸ್ತೆ | ಸಿಟಿಎಸ್ ಸಂ.959ರ ಉಳಿಕೆ | ಸಿಟಿಎಸ್ ಸಂ.959ರ ಉಳಿಕೆ | ಹಳ್ಳ ಮತ್ತು ಫಾಟು ರಸ್ತೆ. |

ಜಿಲ್ಲಾಧಿಕಾರಿಗಳು,
ಪಿ.ಆರ್. 1064 ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು.

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

### ಅಧಿಸೂಚನೆ

**ಸಂಖ್ಯೆ: ಕೆಎಸ್‌ಎ/ಸಿಆರ್-31/94-95, ದಿನಾಂಕ: 6ನೇ ಜುಲೈ, 2004**

ಬೆಂಗಳೂರು ನಗರ ವೈಯಾಲಿಕಾವಲ್ (ಆದಿ ಆಂದ್ರ ಬಡಾವಣೆ ಪಿಟಿಎಸ್. ಸಂ:97, 98) ಪ್ರದೇಶದಲ್ಲಿರುವ ಜಾಗವನ್ನು ಕರ್ನಾಟಕ ಕೊಳಚೆ ಪ್ರದೇಶಗಳ (ನಿರ್ಮೂಲನ ಮತ್ತು ಅಭಿವೃದ್ಧಿ) ಕಾಯ್ದೆ 1973ರ ಸೆಕ್ಷನ್ 3ರಡಿಯಲ್ಲಿ ಅಂತಿಮವಾಗಿ 09.05.1984ರಲ್ಲಿ ಘೋಷಿಸಿ ಅಧಿಸೂಚನೆ ಹೊರಡಿಸಿದೆ. ಇದು ಖಾಸಗಿ ಭೂ ಒಡೆತನಕ್ಕೆ ಸೇರಿರುತ್ತದೆ. ಈ ಪ್ರದೇಶದ ಘೋಷಣೆ ಬಗ್ಗೆ ಯಾವುದೇ ಆಕ್ಷೇಪಣೆಗಳು ಈವರೆವಿಗೂ ಬಂದಿರುವುದಿಲ್ಲ. ಈ ಪ್ರದೇಶವನ್ನು ಕೊಳಚೆ ನಿರ್ಮೂಲನಾ ಪ್ರದೇಶವೆಂದು ಅಧಿನಿಯಮ 11ರಂತೆ ಕೊಳಚೆ ನಿರ್ಮೂಲನಾ ಪ್ರದೇಶವೆಂದು ಘೋಷಿಸಿ ಅಧಿಸೂಚನೆ ಹೊರಡಿಸುವಂತೆ ಆಯುಕ್ತರು ಕಕೊನಿಮ ರವರು ದಿನಾಂಕ:18.04.94ರಂದು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಈ ಪ್ರದೇಶವನ್ನು ದಿನಾಂಕ: 30.06.2004ರಂದು ಸ್ಥಳ ತನಿಖೆ ಮಾಡಿರುತ್ತೇನೆ. ಈ ಜಾಗದಲ್ಲಿ ಮಂಡಳಿಯು ವಾಂಭೆ ಯೋಜನೆಯಡಿಯಲ್ಲಿ 80 ಮನೆಗಳ ವಸತಿ ಸಮುಚ್ಚಯವನ್ನು ನಿರ್ಮಿಸುತ್ತಿರುವುದು ಕಂಡು ಬಂದಿರುತ್ತದೆ. ಆದ್ದರಿಂದ, ಈ ಕೆಳಕಂಡ ಷೆಡ್ಯೂಲ್‌ನಲ್ಲಿರುವ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನಾ) ಕಾಯಿದೆ 1973ರ ಅಧಿನಿಯಮ 11ರಂತೆ ಜಿಲ್ಲಾಧಿಕಾರಿಯವರಿಗೆ ದತ್ತವಾಗಿರುವ ಅಧಿಕಾರದಂತೆ ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು, ರವರು ಅಂತಿಮವಾಗಿ ಕೊಳಚೆ ಪ್ರದೇಶವೆಂದು ಘೋಷಣೆ ಹೊರಡಿಸಲಾಗಿದೆ.

### ಷೆಡ್ಯೂಲ್

ಬೆಂಗಳೂರು ನಗರ ವೈಯಾಲಿಕಾವಲ್ ಎ.ಎ.ಎನ್. ಬ್ಲಾಕ್ ಕೊಳಚೆ ಪ್ರದೇಶದ ಚೆಕ್ಕುಬಂದಿ ಮತ್ತು ಹದ್ದುಬಸ್ತು ತಃಖ್ತೆ:

| ಕ್ರ. ಸಂ. | ಕೊಳಚೆ ಪ್ರದೇಶದ ಹೆಸರು ಮತ್ತು ಸ್ಥಳ | ಮಾಲಿಕರ ಹೆಸರು | ಸರ್ವೆ ನಂ. | ವಿಸ್ತೀರ್ಣ | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ |
|---|---|---|---|---|---|---|---|---|
| 1. | ಬೆಂಗಳೂರು ನಗರ ಎಎಎನ್ ಬ್ಲಾಕ್ ಕೊಳಚೆ ಪ್ರದೇಶ (ವೈಯಾಲಿ ಕಾವಲ್ ಪೊಲೀಸ್ ಸ್ಟೇಷನ್‌ನ ಉತ್ತರ ಭಾಗ) | 1. ಕೆ.ತಿಮ್ಮಯ್ಯ 2. ಹನುಮಂತ ರಾಯಪ್ಪ 3. ಬಿ.ಡಿ.ಎ. ಸ್ವತ್ತು 4. ಮೂಡಲ ಗಿರಿಯಪ್ಪ 5. ಚಿತ್ತೂರು ಚೆಂಗಮ 6. ಬಿಸಿಸಿ ರಸ್ತೆಯ ಭಾಗ | ಪಿಟಿಎಸ್ ಸಂ.97 ಚಾಲ್ತಿ ಸಂ:104<br>ಪಿಟಿಎಸ್ 98 ಚಾಲ್ತಿ ಸಂ:331, 332 | 844.40<br>57.50<br>55.06<br>91.00 | 1ನೇ ಮುಖ್ಯ ರಸ್ತೆ ಮತ್ತು ಕರಿನಗ ಮುನಿಸ್ವಾಮಿ ಹಾಗೂ ಸಿ. ಮುನಿಸ್ವಾಮಿ ಇವರ ಖಾಸಗಿ ಸ್ವತ್ತು | ಚೆಂಗಮರಾಜು, ಬೋರಯ್ಯ ಬಿ. ಮತ್ತು ಬಿ.ಆರ್. ನಾರಾಯಣ ಅಯ್ಯಂಗಾರ್ ರವರ ಖಾಸಗಿ ಸ್ವತ್ತು | ನಾರಾಯಣ ಸ್ವಾಮಿ ಮತ್ತು ಇತರರ ಖಾಸಗಿ ಸ್ವತ್ತು ಮತ್ತು ಅಡ್ಡರಸ್ತೆ | ಎನ್.ವಿ. ಎನ್. ಅಯ್ಯಂ ಗಾರ್ ರವರ ಖಾಸಗಿ ಸ್ವತ್ತು ಮತ್ತು 1ನೇ ಮುಖ್ಯ ರಸ್ತೆ |

ಜಿಲ್ಲಾಧಿಕಾರಿಗಳು,
ಪಿ.ಆರ್. 1065 ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು.

## ಸಹಕಾರ ಸಂಘಗಳ ಉಪನಿಬಂಧಕರು-1, ಬೆಂಗಳೂರು ನಗರ ಜಿಲ್ಲೆ, ಪಂಪಮಹಾಕವಿ ರಸ್ತೆ, ಚಾಮರಾಜಪೇಟೆ, ಬೆಂಗಳೂರು-18 ಇವರ ಕಾರ್ಯಾಲಯದಿಂದ

**ಕ್ರಮ ಸಂಖ್ಯೆ: ಡಿಆರ್‌ಬಿ:1/ ಸಮಾಪನೆ/14/2000-01, ದಿನಾಂಕ: 5ನೇ ಜುಲೈ, 2004**

**ವಿಷಯ :** ಚಿಕ್ಕಪೇಟೆ ಸ್ವಕುಳಸಾಳಿ ಸಿಲ್ಕ್ ಹ್ಯಾಂಡ್‌ಲೂಂ ವೀವರ್ಸ್ ಕೋ-ಆಪರೇಟಿವ್ ಸೊಸೈಟಿ ಲಿ., ಇದರ ನೋಂದಣಿಯನ್ನು ರದ್ದುಪಡಿಸಿರುವ ಬಗ್ಗೆ.

**ಪ್ರಸ್ತಾವನೆ:**

ಚಿಕ್ಕಪೇಟೆ ಸ್ವಕುಳಸಾಳಿ ಸಿಲ್ಕ್ ಹ್ಯಾಂಡ್‌ಲೂಮ್ ವೀವರ್ಸ್ ಕೋ-ಆಪರೇಟಿವ್ ಸೊಸೈಟಿ ಲಿ., ನಂ.58, ಹೆಚ್.ಹೆಚ್. ಸೇಬಂ ಮಹಲ್ ಕಾಂಪ್ಲೆಕ್ಸ್, ಕಾಟನ್ ಪೇಟೆ ಮುಖ್ಯರಸ್ತೆ, ಬೆಂಗಳೂರು-53. ಈ ಸಂಘವು ನೋಂದಣಿ ಸಂಖ್ಯೆ: ಜೆಡಿ/ಆರ್‌ಐ/319/62-63 ದಿನಾಂಕ:08.04.1962ರಂದು ನೋಂದಾಯಿಸಲ್ಪಟ್ಟಿದ್ದು, ಈ ಸಂಘವು ತನ್ನ ಬೈಲಾಗನುಗುಣವಾಗಿ ಕಾರ್ಯ ನಿರ್ವಹಿಸದೆ ಸ್ಥಗಿತಗೊಂಡಿದ್ದ ಕಾರಣ ಈ ಸಂಘವನ್ನು ಸಹಕಾರ ಸಂಘಗಳ ಕಾಯಿದೆ 1959ರ ಕಲಂ 72(1)ರ ಅವಕಾಶದಂತೆ ಸಹಕಾರ ಸಂಘಗಳ ಉಪ ನಿಬಂಧಕರು-1, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಇವರು ತಮ್ಮ ಆದೇಶ ಸಂಖ್ಯೆ: ಡಿಆರ್‌ಬಿ-1/ ಸಮಾಪನೆ/10/99-2000 ದಿನಾಂಕ: 30.11.1999ರನ್ವಯ ಹಾಗೂ ತಿದ್ದುಪಡಿ ಆದೇಶ ಸಂಖ್ಯೆ: ಡಿಆರ್‌ಬಿ-1:ಸಮಾಪನೆ:10:1999-2000 ದಿನಾಂಕ:04.12.99ರನ್ವಯ ಸಮಾಪನೆಗೊಳಿಸಿ ಸಮಾಪಕರನ್ನು ನೇಮಕ ಮಾಡಲಾಗಿತ್ತು. ಈ ಸಂಘದ ಅಸ್ತಿತ್ವ ದೊರಕದ ಕಾರಣ ಇದೇ ಕಾಯ್ದೆ ಕಲಂ 75ರ ಅನುಸಾರ ಸಹಕಾರ ಸಂಘಗಳ ಉಪ ನಿಬಂಧಕರು-1, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಇವರು ತಮ್ಮ ಆದೇಶ ಸಂಖ್ಯೆ: ಡಿಆರ್‌ಬಿ-1:

ನೋಂದಣಿ ರದ್ದತಿ:14:2000-01, ದಿನಾಂಕ:24.06.2000ರ ಆದೇಶದಲ್ಲಿ ಈ ಸಂಘದ ನೋಂದಣಿಯನ್ನು ರದ್ದುಪಡಿಸಲಾಗಿತ್ತು. ಈ ಸಂಘದ ಕಾರ್ಯದರ್ಶಿಯವರು ಕರ್ನಾಟಕ ಸಹಕಾರ ಸಂಘಗಳ ಕಾಯಿದೆ ಕಲಂ 106ರ ಅಡಿಯಲ್ಲಿ ಸಮಾಪನಾ ಆದೇಶದ ವಿರುದ್ಧ ಸಹಕಾರ ಸಂಘಗಳ ಜಂಟಿ ನಿಬಂಧಕರು, ಬೆಂಗಳೂರು ವಿಭಾಗ, ಬೆಂಗಳೂರು ಇವರ ಮುಂದೆ ಅಪೀಲು ಸಲ್ಲಿಸಿದ್ದು, ಸದರಿ ಜಂಟಿ ನಿಬಂಧಕರು, ಈ ಅಪೀಲನ್ನು ಆದೇಶ ಸಂಖ್ಯೆ: ಜೆಆರ್‌ಬಿ:ಅಪೀಲು:4:2000-2001, ದಿನಾಂಕ: 28.06.2001ರಂದು ವಜಾ ಮಾಡಿ ಆದೇಶ ನೀಡಿರುತ್ತಾರೆ. ಈ ಆದೇಶದ ವಿರುದ್ಧ ಸಂಘದ ಕಾರ್ಯದರ್ಶಿಯವರು ರಾಜ್ಯ ಶ್ರೇಷ್ಠ ನ್ಯಾಯಾಲಯದ ಮುಂದೆ ರಿಟ್ ಅರ್ಜಿ ಸಂಖ್ಯೆ:25314-315/2001ರ ಮೂಲಕ ಪ್ರಶ್ನಿಸಿದ್ದರು. ಸದರಿ ರಿಟ್ ಅರ್ಜಿ ವಿಚಾರಣೆ ನಡೆದು ಮಾನ್ಯ ಶ್ರೇಷ್ಠ ನ್ಯಾಯಾಲಯವು ದಿನಾಂಕ:27.11.2003ರಂದು ಆದೇಶ ಹೊರಡಿಸಿರುತ್ತದೆ. ಸದರಿ ಶ್ರೇಷ್ಠ ನ್ಯಾಯಾಲಯವು ಮೇಲಿನ ಆದೇಶದಲ್ಲಿ ಈ ಕೆಳಕಂಡಂತೆ ಆದೇಶ ನೀಡಿರುತ್ತದೆ.

"The Writ petition is allowed and the impugned order at "Annexure -A" Dated:30-11-1999 on the file of the 1st Respondent and an order Dated:28-06-2000 at "Annexure-B" on the file of 2nd respondent are quashed. The petitioner/ Society is directed to appear before the 1st respondent on 15-12-2003 for further proceedings and also furnish correct address of the Petitioner/ Society. Further, the 1st respondent is directed to dispose of matter within 3 months from 15-12-2003."

ಸದರಿ ಆದೇಶದಲ್ಲಿ ಸಹಕಾರ ಸಂಘಗಳ ಉಪ ನಿಬಂಧಕರವರ ಸಮಾಪನಾ ಆದೇಶ ದಿನಾಂಕ:30.11.1999 ಮತ್ತು ಸಹಕಾರ ಸಂಘಗಳ ಸಂಯುಕ್ತ ನಿಬಂಧಕರವರ ಆದೇಶ ದಿನಾಂಕ:28.06.2001ನ್ನು ವಜಾಗೊಳಿಸಿರುತ್ತದೆ. ಮುಂದುವರಿದು ಅರ್ಜಿದಾರರು ದಿನಾಂಕ:15.12.2003ರಂದು ಸಹಕಾರ ಸಂಘಗಳ ಉಪ ನಿಬಂಧಕರವರ ಮುಂದೆ ಹಾಜರಾಗಿ ಸಂಘದ ಸರಿಯಾದ ವಿಳಾಸ ಒದಗಿಸುವಂತೆ ಅರ್ಜಿದಾರರಿಗೆ ಸೂಚನೆ ನೀಡಿದ್ದು, ಉಪನಿಬಂಧಕರು ಈ ಬಗ್ಗೆ ವಿಚಾರಣೆ ಕೈಗೊಂಡು ಸದರಿ ದಿನಾಂಕದಿಂದ 3 ತಿಂಗಳೊಳಗಾಗಿ ವಿಚಾರಣೆಯನ್ನು ಪೂರ್ಣಗೊಳಿಸುವಂತೆ ಆದೇಶಿಸಲಾಗಿದೆ.

ದಿನಾಂಕ:15.12.2003ರಂದು ಈ ಸಂಘದ ಅಧ್ಯಕ್ಷರು, ಎಂದು ಶ್ರೀ ಎಸ್.ಎನ್. ಅನಂತಮೂರ್ತಿ ಎಂಬುವವರು ಸಹಕಾರ ಸಂಘಗಳ ಉಪ ನಿಬಂಧಕರವರ ಮುಂದೆ ಹಾಜರಾಗಿದ್ದು, ದಿನಾಂಕ:12.12.2003ರಂದು ಈ ಸಂಘದ ಕಾರ್ಯದರ್ಶಿಯವರು ಸಹಕಾರ ಸಂಘಗಳ ಉಪ ನಿಬಂಧಕರಿಗೆ ಬರೆದಿರುವ ಪತ್ರವನ್ನು ಹಾಜರುಪಡಿಸಿರುತ್ತಾರೆ. ಈ ಪತ್ರದ ಲೆಟರ್‌ಹೆಡ್‌ನಲ್ಲಿ ಈ ಸಂಘದ ವಿಳಾಸವು ನಂ.10, 1ನೇ ಮುಖ್ಯರಸ್ತೆ ಸುಧಾಮನಗರ, ಬೆಂಗಳೂರು-27 ಎಂದಿರುತ್ತದೆ. ಆದರೆ ಸದರಿ ದಿನದಂದು ಮೇಲಿನ ರಿಟ್ ಅರ್ಜಿಯಲ್ಲಿ ಅರ್ಜಿದಾರರಾದ ಈ ಸಂಘದ ಕಾರ್ಯದರ್ಶಿಯವರು ಉಚ್ಚ ನ್ಯಾಯಾಲಯದ ಆದೇಶದಂತೆ ಹಾಜರಾಗಿರುವುದಿಲ್ಲ. ಸದರಿ ದಿನಾಂಕ: 12.12.2003ರ ಕಾರ್ಯದರ್ಶಿಯವರ ಪತ್ರದಲ್ಲಿ ಈ ಕೆಳಗಿನ ವಿವರಗಳನ್ನು ನೀಡಿರುತ್ತಾರೆ.

"ಸಹಕಾರ ಸಂಘಗಳ ಕಾಯಿದೆಯಂತೆ ತಮಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ ಜವಳಿ ಆಯುಕ್ತರು/ ಅಪರ ನಿಬಂಧಕರು, ಸಹಕಾರಿ ಇಲಾಖೆ ಇವರ ಆದೇಶದ ಮೇರೆಗೆ ಉಪ ನಿರ್ದೇಶಕರು, ಜವಳಿ ಇಲಾಖೆ ಇವರು ದಿನಾಂಕ:07.07.2001ರಂದು ಸಂಘಕ್ಕೆ ಭೇಟಿ ನೀಡಿ ಸಂಘದ ಲೆಕ್ಕ ಪತ್ರಗಳನ್ನು ಸಂಘವು ಕೈಮಗ್ಗದ ಮಹಾಮಂಡಲದೊಂದಿಗೆ ನಡೆಸಿರುವ ವ್ಯವಹಾರವನ್ನು ಸಂಘವು ಬ್ಯಾಂಕಿನಲ್ಲಿ ವ್ಯವಹರಿಸಿರುವುದನ್ನು, ಸಂಘವು ಸದಸ್ಯರೊಂದಿಗೆ ವ್ಯವಹರಿಸಿರುವುದನ್ನು ಪರೀಕ್ಷಿಸಿ, ಸಲ್ಲಿಸಿರುವ ವರದಿ ಮೇರೆಗೆ ಜವಳಿ ಆಯುಕ್ತರು ಸಂಘದ ಪರಿಸಮಾಪ್ತಿ ಆದೇಶವನ್ನು ರದ್ದುಗೊಳಿಸುವಂತೆ ದಿನಾಂಕ:09.07.2001ರಂದು ತಮಗೆ ಆದೇಶ ನೀಡಿರುತ್ತಾರೆ. ಸದರಿ ಆದೇಶದಲ್ಲಿ ಸಂಘದ ವಿಳಾಸವನ್ನು ಅವರು ಸೂಚಿಸಿರುತ್ತಾರೆ. ಈ ಹಿಂದೆ ಸಂಘವು ರೇಷ್ಮೆ ಮಹಲ್ ಕಾಂಪ್ಲೆಕ್ಸ್, ಕಬ್ಬನ್‌ಪೇಟೆ ಮುಖ್ಯರಸ್ತೆ ಇಲ್ಲಿ ಕಾರ್ಯ ನಿರ್ವಹಿಸುತ್ತಿದ್ದು, 1997ರಲ್ಲಿ ಸಂಘವು ಮೇಲ್ಕಂಡ ವಿಳಾಸಕ್ಕೆ ಬದಲಾಯಿಸಿರುತ್ತದೆ. ವಿಳಾಸ ಬದಲಾವಣೆಯನ್ನು ಸಹಕಾರ ಇಲಾಖೆಯ ಎಲ್ಲಾ ಕಛೇರಿಗಳಿಗೂ ಜವಳಿ ಇಲಾಖೆಯ ಎಲ್ಲಾ ಕಛೇರಿಗಳಿಗೂ ಕೈಮಗ್ಗದ ಮಹಾಮಂಡಳಕ್ಕೂ ಹಾಗೂ ಸಂಘದ ಸದಸ್ಯರಿಗೆ ಸೂಚಿಸಲಾಗಿದೆ. ಈ ಪತ್ರದಂತೆ ಕೈಮಗ್ಗದ ಮಹಾಮಂಡಳಿಯು ಸಂಘಕ್ಕೆ ಬರೆದ ಟಪಾಲಿನ ಒಂದು ಪ್ರತಿಯನ್ನು ತಮ್ಮ ಗಮನಕ್ಕಾಗಿ ಲಗತ್ತಿಸಲಾಗಿದೆ. ದಯಮಾಡಿ ಸಂಘವು ಊರ್ಜಿತವಾಗಿದೆಯೆಂದು ತಮ್ಮ ಕಛೇರಿಯ ಕಡತಗಳಲ್ಲಿ ನಮೂದಿಸಿ ಹಿಂಬರಹ ನೀಡಬೇಕೆಂದು ಕೋರುತ್ತೇನೆ."

ದಿನಾಂಕ: 31.12.2003ರಂದು ಸಂಘದ ಅಧ್ಯಕ್ಷರು ಎಂದು ಹೇಳುವ ಶ್ರೀ ಎಸ್.ಎನ್. ಅನಂತಮೂರ್ತಿ ಎನ್ನುವವರು ವಿಚಾರಣೆಗೆ ಹಾಜರಾಗಿರುತ್ತಾರೆ. ಸದರಿ ದಿನದಂದು ಸಂಘದ ನಿರ್ದೇಶಕರ ಪಟ್ಟಿ, ಸಂಘದ ಆಡಿಟ್ ವರದಿಯೊಂದಿಗೆ ಸಂಘದ ಮುಖ್ಯ ಕಾರ್ಯ ನಿರ್ವಹಣಾಧಿಕಾರಿಯವರನ್ನು ಹಾಜರಾಗುವಂತೆ ಸೂಚಿಸಿ ದಿನಾಂಕ: 17.01.2004ಕ್ಕೆ ಮುಂದೂಡಲಾಗಿತ್ತು. ದಿನಾಂಕ: 17.01.2004ರಂದು ಸದರಿ ಅಧ್ಯಕ್ಷರು ಮಾತ್ರ ಹಾಜರಾಗಿ ಅದೇ ದಿನ ಒಂದು ಪತ್ರವನ್ನು ನೀಡಿ ಸಂಘದ ಆಡಳಿತ ಮಂಡಳಿ ಸದಸ್ಯರ ಪಟ್ಟಿ ಹಾಗೂ ಸಂಘವು ಅಪೆಕ್ಸ್ ಬ್ಯಾಂಕ್ ಮತ್ತು ಬಿಆರ್ ಅಂಡ್ ಬಿಡಿಸಿಸಿ ಬ್ಯಾಂಕಿನಲ್ಲಿ ನಡೆಸಿರುವ ವ್ಯವಹಾರಗಳ ಖಾತೆಯ ಉದ್ಧೃತ ಭಾಗದ ಪ್ರತಿಗಳು ಹಾಗೂ ಕರ್ನಾಟಕ ರಾಜ್ಯ ಕೈಮಗ್ಗ ನೇಕಾರರ ಮಹಾಮಂಡಳಿಯಲ್ಲಿನ ವ್ಯವಹಾರದ ಬಗ್ಗೆ ಲೆಡ್ಜರ್ ಎಕ್ಸ್‌ಟ್ರಾಕ್ಟ್‌ಗಳ ಜೆರಾಕ್ಸ್ ಪ್ರತಿಗಳನ್ನು ಸಲ್ಲಿಸಿರುತ್ತಾರೆ. ಸದರಿ ಮಹಾಮಂಡಳಿ ಲೆಡ್ಜರ್ ಎಕ್ಸ್‌ಟ್ರಾಕ್ಟ್ ಪ್ರತಿಗಳಲ್ಲಿ ಸಂಘವು 1999-2000, 2000-2001ರಲ್ಲಿ ನಡೆಸಿರುವ ವ್ಯವಹಾರಗಳು ಮಾತ್ರ ಕಂಡು ಬರುತ್ತವೆ. ಅಪೆಕ್ಸ್ ಬ್ಯಾಂಕ್ ಖಾತೆಯಲ್ಲಿ 30.03.2000ದವರೆಗೆ ವ್ಯವಹಾರ ನಡೆಸಿರುವುದು ಕಂಡು ಬಂದಿದೆ. ಬಿಡಿ ಅಂಡ್ ಬಿಆರ್‌ಡಿಸಿಸಿ ಬ್ಯಾಂಕಿನ ಖಾತೆಯಲ್ಲಿ ದಿನಾಂಕ: 10.01.2004 ರವರೆಗೆ ವ್ಯವಹಾರ ನಡೆಸಿರುವುದು ಕಂಡು ಬಂದಿದೆ. ವಿಚಾರಣೆಯನ್ನು ದಿನಾಂಕ: 03.02.2004 ರಂದು ಮುಂದೂಡಿದ್ದು ಸದರಿ ದಿನದಂದು ಯಾರೂ ಹಾಜರಾಗಿರುವುದಿಲ್ಲ. ಮುಂದಿನ ವಿಚಾರಣೆ ದಿನಾಂಕ: 10.02.2004ರಂದು ಕೈಗೊಂಡಿದ್ದು ಸದರಿ ದಿನದಂದು ಅಧ್ಯಕ್ಷರು ಹಾಜರಾಗಿದ್ದು ಸದರಿಯವರಿಗೆ ನಗದು ಪುಸ್ತಕ, ಠರಾವು ಪುಸ್ತಕ, ವ್ಯಾಪಾರ ವಹಿವಾಟಿನ ಪುಸ್ತಕ, ಮಹಾಸಭೆ ನಡವಳಿಕೆ ಪುಸ್ತಕ ಹಾಗೂ ಆಡಿಟ್ ವರದಿಗಳೊಂದಿಗೆ ಸಂಘದ ಎಲ್ಲಾ ನಿರ್ದೇಶಕರು ಮತ್ತು ಕಾರ್ಯದರ್ಶಿಯೊಂದಿಗೆ ವಿಚಾರಣೆಗೆ ದಿನಾಂಕ:03.03.2004ರಂದು ಹಾಜರಾಗುವಂತೆ ಸೂಚಿಸಿ ಮುಂದೂಡಲಾಗಿತ್ತು.

ಆದರೆ ದಿನಾಂಕ:03.03.2004ರಂದು ಸಹಕಾರ ಸಂಘಗಳ ಉಪನಿಬಂಧಕರು ಅನ್ಯ ಕೆಲಸದ ಮೇಲಿದ್ದ ಕಾರಣ ಈ ವಿಚಾರಣೆಯನ್ನು ದಿನಾಂಕ: 29.04.2004ಕ್ಕೆ ಮುಂದೂಡಲಾಗಿತ್ತು. ದಿನಾಂಕ:29.04.2004ರಂದು ವಿಚಾರಣೆ ಕೈಗೊಳ್ಳಲಾಗಿ ಸದರಿ ದಿನದಂದು ಸಂಘದ ಅಧ್ಯಕ್ಷರಾಗಲೀ, ಕಾರ್ಯದರ್ಶಿಯಾಗಲೀ, ಆಡಳಿತ ಮಂಡಳಿ ಸದಸ್ಯರಾಗಲೀ ಯಾರೂ ಸಹ ಹಾಜರಾಗಿರಲಿಲ್ಲ. ಆದ್ದರಿಂದ ಸದರಿಯವರ ಹಾಜರಾತಿಗೆ ಹಾಗೂ ಪರಿಶೀಲನೆಗೆ ಅಪೇಕ್ಷಿಸಿದ್ದ ಮೇಲಿನ ದಾಖಲೆಗಳನ್ನು ಹಾಜರುಪಡಿಸಲು ಮತ್ತೊಂದು ಅವಕಾಶ ನೀಡಿ ದಿನಾಂಕ:04.06.2004ಕ್ಕೆ ಮುಂದೂಡಲಾಯಿತು. ಹಾಗೂ ಸದರಿ ದಿನದಂದು ಲಿಖಿತವಾಗಿ ಸಂಘಕ್ಕೆ ನೋಟೀಸು ಜಾರಿಗೊಳಿಸಿ ದಿನಾಂಕ: 14.06.2004ರಂದು ವಿಚಾರಣೆಗೆ ಹಾಜರಾಗುವಂತೆ ಸೂಚಿಸಲಾಗಿತ್ತು. ಆದರೆ ಸದರಿ ದಿನದಂದು ಸಹಕಾರ ಸಂಘಗಳ ಉಪ ನಿಬಂಧಕರಿಗೆ ಬೇರೆ ಕೆಲಸವಿದ್ದ ಕಾರಣ ಹಾಗೂ ಈ ವಿಚಾರಣೆಗೆ ಯಾರೂ ಸಹ ಹಾಜರಾಗದೆ ಇದ್ದ ಕಾರಣ ಈ ವಿಚಾರಣೆಯನ್ನು ದಿನಾಂಕ: 15.06.2004ಕ್ಕೆ ಮುಂದೂಡಲಾಯಿತು. ದಿನಾಂಕ:15.06.2004ರಂದು ಸಂಘದ ಅಧ್ಯಕ್ಷರು ಹಾಜರಾಗಿ ದಿನಾಂಕ:14.06.2004ರ ದಿನಾಂಕವಿರುವ ಒಂದು ಲಿಖಿತ ಪತ್ರ ನೀಡಿದ್ದು ಸದರಿ ಪತ್ರದಲ್ಲಿ "ಸಂಘದ 1993-1994ನೇ ಸಾಲಿನಿಂದ 2002-2003ನೇ ಸಾಲಿನವರೆಗೆ ಆಡಿಟ್ ಪೂರ್ಣಗೊಂಡಿದ್ದು ವರದಿ ತಲುಪುವ ಹಂತದಲ್ಲಿದೆ. ಆದ್ದರಿಂದ ಸದರಿ ವಿಚಾರಣೆಯನ್ನು ಆಡಿಟ್ ವರದಿಗಳು ಬರುವವರೆಗೂ ಮುಂದೂಡಬೇಕೆಂದು" ವಿನಂತಿಸಿದ್ದಾರೆ. ಅದರಂತೆ ವಿಚಾರಣೆಯನ್ನು ಮತ್ತೊಂದು ಅವಕಾಶ ನೀಡಿ ದಿನಾಂಕ:29.06.2004ಕ್ಕೆ ಮುಂದೂಡಲಾಯಿತು. ಆದರೆ ಈ ದಿನಾಂಕದಂದು ಸಂಘದ ಆಡಳಿತ ಮಂಡಳಿ ಸದಸ್ಯರಾಗಲೀ, ಕಾರ್ಯದರ್ಶಿಯಾಗಲೀ, ಅಧ್ಯಕ್ಷರಾಗಲೀ ಯಾರೂ ಸಹ ಹಾಜರಾಗಿರುವುದಿಲ್ಲ.

ಈ ವಿಚಾರಣೆಯು ದಿನಾಂಕ: 15.12.2003ರಿಂದ ದಿನಾಂಕ: 29.06.2004ವರೆವಿಗೂ 10 ಬಾರಿ ವಿಚಾರಣೆ ನಡೆದಿದ್ದರೂ ಸಹ ಈ ವಿಚಾರಣೆಗೆ ಸಂಘದ ಅಧ್ಯಕ್ಷರೆಂದು ಹೇಳುವ ಶ್ರೀ ಎಸ್.ಎನ್ ಅನಂತಮೂರ್ತಿ ಇವರು 5 ಬಾರಿ ಮಾತ್ರ ಹಾಜರಾಗಿರುತ್ತಾರೆ. ಆದರೂ ಈ ವಿಚಾರಣೆಯಲ್ಲಿ ಅಪೇಕ್ಷಿಸಿದ ಯಾವುದೇ ಅಧಿಕೃತ ಮಾಹಿತಿಗಳನ್ನು ಒದಗಿಸಿರುವುದಿಲ್ಲ. ಈ ವಿಚಾರಣೆಗೆ ಆಡಳಿತ ಮಂಡಳಿ ಸದಸ್ಯರಾಗಲೀ, ಕಾರ್ಯದರ್ಶಿಯಾಗಲೀ ಯಾರೂ ಸಹ ಹಾಜರಾಗಿರುವುದಿಲ್ಲ. ಈ ಸಂಘದ ಕಾರ್ಯಚಟುವಟಿಕೆ ಬಗ್ಗೆ ಸಂಘವು ಕಾಯ್ದೆ ಮತ್ತು ನಿಯಮಗಳನ್ವಯ ನಿರ್ವಹಿಸಬೇಕಾದ ಯಾವುದೇ ಮೂಲ ದಾಖಲೆಗಳನ್ನು ವಿಚಾರಣೆಗೆ ಪರಿಶೀಲಿಸಲು ಒದಗಿಸಿರುವುದಿಲ್ಲ. ಈ ಸಂಘವು ನೋಂದಾಯಿತ ವಿಳಾಸವೆಂದು ಒದಗಿಸಿರುವ ನಂ.10, 1ನೇ ಮುಖ್ಯರಸ್ತೆ, ಸುಧಾಮನಗರ, ಬೆಂಗಳೂರು-27, ಇಲ್ಲಿಗೆ ಸಹಕಾರ ಸಂಘಗಳ ಉಪನಿಬಂಧಕರು-1, ಬೆಂಗಳೂರು ನಗರ ಜಿಲ್ಲೆ, ತಮ್ಮ ಅಧೀನ ಸಿಬ್ಬಂದಿಯೊಂದಿಗೆ ದಿನಾಂಕ:29.06.2004ರಂದು ಮಧ್ಯಾಹ್ನ 3.30ರ ಸಮಯಕ್ಕೆ ಭೇಟಿ ನೀಡಿ ಸ್ಥಳ ಪರಿಶೀಲನೆ ಮಾಡಲಾಗಿ ಈ ವಿಳಾಸವು ಸಂಘದ ಅಧ್ಯಕ್ಷರೆಂದು ಹೇಳುವ ಶ್ರೀ ಎಸ್.ಎನ್. ಅನಂತಮೂರ್ತಿ ಎಂಬುವವರು ವಾಸಿಸುತ್ತಿರುವ ಮನೆಯ ವಿಳಾಸವಾಗಿರುತ್ತದೆ. ಈ ವಿಳಾಸದಲ್ಲಿ ಈ ಸಂಘವು ಕೆಲಸ ನಿರ್ವಹಿಸುತ್ತಿರುವುದಿಲ್ಲ. ಈ ಸಂಘದ ನಾಮಫಲಕವನ್ನು ಈ ಕಟ್ಟಡದ ಯಾವುದೇ ಭಾಗದಲ್ಲಿ ಪ್ರದರ್ಶಿಸಿರುವುದಿಲ್ಲ. ಈ ಬಗ್ಗೆ ಈ ಸಂಘವು ಕೆಲಸ ನಿರ್ವಹಿಸುತ್ತಿದೆಯೇ? ಎಂಬ ಬಗ್ಗೆ ಕಟ್ಟಡದ ಅಕ್ಕ-ಪಕ್ಕದವರನ್ನು ವಿಚಾರಿಸಲಾಗಿ ಯಾರೂ ಸಹ ಈ ಹೆಸರಿನ ಸಂಘ ಇಲ್ಲಿ ಕೆಲಸ ನಿರ್ವಹಿಸುತ್ತಿಲ್ಲವೆಂದು ತಿಳಿಸಿರುತ್ತಾರೆ. ಈ ಸಂಘಕ್ಕೆ ಪ್ರತ್ಯೇಕ ಕಛೇರಿ ಇರುವುದಿಲ್ಲ ಎಂಬುದನ್ನು ಸ್ಥಳ ಪರಿಶೀಲನೆಯಿಂದ ದೃಢಪಡಿಸಿಕೊಳ್ಳಲಾಗಿದೆ.

ಸಂಘದ ಅಧ್ಯಕ್ಷರು ದಿನಾಂಕ: 15.06.2004ರಂದು ನೀಡಿರುವ ಪತ್ರದಲ್ಲಿ ಸಂಘದ 1993-94ನೇ ಸಾಲಿನಿಂದ 2002-2003ನೇ ಸಾಲಿನವರೆಗೆ ಆಡಿಟ್ ನಡೆಯುತ್ತಿರುವುದಾಗಿ ತಿಳಿಸಿರುತ್ತಾರೆ. ಅಂದರೆ ಕಾಯ್ದೆಯ ಅವಕಾಶದಂತೆ ಈ ಸಂಘವು ಪ್ರತಿವರ್ಷ ಲೆಕ್ಕ ಪತ್ರಗಳ ತಪಾಸಣೆಯನ್ನು ಮಾಡಲು ಆಯಾಯ ವರ್ಷವೇ ಆಡಿಟ್ ಇಲಾಖೆಗೆ ಲೆಕ್ಕ ಪತ್ರಗಳನ್ನು ಒದಗಿಸಬೇಕಾಗಿತ್ತು. ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959 ಕಲಂ 63(4ಎ) ಅನ್ವಯ ಪ್ರತಿ ವರ್ಷಾಂತ್ಯಗೊಂಡ ನಂತರ 60 ದಿನಗಳೊಳಗಾಗಿ ಸಂಘದ ಲೆಕ್ಕ ಪತ್ರಗಳ ತಃಖ್ತೆಯನ್ನು ಲೆಕ್ಕ ಪರಿಶೋಧನಾ ಇಲಾಖೆಗೆ ಹಾಗೂ ಸಹಕಾರ ಇಲಾಖೆಗೆ ಪ್ರತಿಯೊಂದು ಸಂಘವು ಸಲ್ಲಿಸಬೇಕಾಗಿರುತ್ತದೆ. ಇದೇ ಕಾಯ್ದೆ ಕಲಂ 63ರ ಪ್ರಕಾರ ಪ್ರತಿಯೊಂದು ಸಂಘದ ವಹಿವಾಟಿನ ಲೆಕ್ಕ ಪತ್ರಗಳನ್ನು ಪ್ರತಿವರ್ಷ ಲೆಕ್ಕ ಪರಿಶೋಧನೆಗೆ ಗುರಿಪಡಿಸಬೇಕಾಗಿರುತ್ತದೆ. ಇದೇ ಕಾಯ್ದೆ ಕಲಂ 63(7)ರ ಪ್ರಕಾರ ಆಡಿಟ್ ಮಾಡಿಸಿ ವರದಿ ಪಡೆದುಕೊಳ್ಳಬೇಕಾದ್ದು, ಈ ವರದಿಯ ಮೇಲೆ ಅನುಪಾಲನಾ ವರದಿಯನ್ನು ಸಹಕಾರ ಇಲಾಖೆಗೆ, ಆಡಿಟ್ ಇಲಾಖೆಗೆ ಸಲ್ಲಿಸಬೇಕಾದ್ದು ಪ್ರತಿಯೊಂದು ಸಂಘದ ಕರ್ತವ್ಯವಾಗಿರುತ್ತದೆ. ಅಂದರೆ ಈ ಸಂಘವು ಈ ಮೇಲಿನ ಕಾಯ್ದೆ ಅವಕಾಶದಂತೆ ಯಾವುದೇ ಕ್ರಮವನ್ನು ನಿರ್ವಹಿಸದೇ ವಿಫಲವಾಗಿರುವುದು ಕಂಡು ಬರುತ್ತದೆ. ಇದನ್ನು ಗಮನಿಸಿದಾಗ ಸಂಘವು ತನ್ನ ವಹಿವಾಟನ್ನು ಸ್ಥಗಿತಗೊಳಿಸಿದ್ದು, ಸಂಘವು ಕಾರ್ಯಚಟುವಟಿಕೆಗಳನ್ನು ನಡೆಸುತ್ತಿಲ್ಲ ಎಂಬುದು ಸಾಬೀತಾಗುತ್ತದೆ.

ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯದ ಆದೇಶದಲ್ಲಿ ಈ ಸಂಘದ ಕಾರ್ಯದರ್ಶಿಯವರು ರಿಟ್ ಅರ್ಜಿ ಸಲ್ಲಿಸಿದ್ದು ನ್ಯಾಯಾಲಯವು ದಿನಾಂಕ:27.11.2003ರಂದು ಹೊರಡಿಸಿರುವ ಆದೇಶವು ಸಂಘದ ಕಾರ್ಯದರ್ಶಿಯವರಿಗೆ ಅನ್ವಯವಾಗಬೇಕಾಗಿದ್ದು ಈ ಕಾರ್ಯದರ್ಶಿಯವರು ನ್ಯಾಯಾಲಯದ ಆದೇಶದಂತೆ ಉಪ ನಿಬಂಧಕರ ಮುಂದೆ ಹಾಜರಾಗಬೇಕಾಗಿರುತ್ತದೆ. ಆದರೆ ಕಾರ್ಯದರ್ಶಿಯವರು ಈ ವಿಚಾರಣೆಗೆ ಯಾವೊಂದು ದಿನವೂ ಹಾಜರಾಗಿರುವುದಿಲ್ಲ. ಸಂಘದ ಅಧ್ಯಕ್ಷರೊಬ್ಬರು ಮಾತ್ರ ವಿಚಾರಣೆಗೆ ಹಾಜರಾಗಿ ಈ ಸಂಘವು ಇಂತಹದೇ ವಿಳಾಸದಲ್ಲಿ ಕಾರ್ಯ ನಿರ್ವಹಿಸುತ್ತಿದೆ ಎಂಬ ಬಗ್ಗೆ ವಿಳಾಸವನ್ನು ನೀಡಿರುವುದಿಲ್ಲ. ಆದರೆ ಸದರಿಯವರು ವಿಚಾರಣೆಗೆ ನೀಡಿರುವ ಪತ್ರದಲ್ಲಿನ ಸಂಘದ ಲೆಟರ್ ಹೆಡ್‌ನಲ್ಲಿ ನಮೂದಿಸಿರುವ ವಿಳಾಸವನ್ನು ಸಂಘದ ಅಧಿಕೃತ ವಿಳಾಸವೆಂದು ಪರಿಗಣಿಸಲಾಗಿದೆ. ಕಾರ್ಯದರ್ಶಿ ವಿಚಾರಣೆಗೆ ಗೈರು ಹಾಜರಾಗಿರುವುದನ್ನು ಗಮನಿಸಿದರೆ ಈ ಸಂಘಕ್ಕೆ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 29ಜಿ(1)ರನ್ವಯ ಮುಖ್ಯ ಕಾರ್ಯ ನಿರ್ವಹಣಾಧಿಕಾರಿಯನ್ನು ನೇಮಕಾತಿ ಮಾಡಿಕೊಂಡಿರುವುದು ಅನುಮಾನಾಸ್ಪದವಾಗಿದೆ. ಕಲಂ 29ಜಿ(1)ರನ್ವಯ ನೇಮಕಗೊಂಡ ಕಾರ್ಯದರ್ಶಿ/ ಮುಖ್ಯ ಕಾರ್ಯನಿರ್ವಹಣಾಧಿಕಾರಿಯು ಕಲಂ 29ಜಿ(6)ರನ್ವಯ ಪ್ರತಿ ಮಾಹೆ ಸಂಘದ ಜಮಾ-ಖರ್ಚುಗಳನ್ನು ಮಾಸಾಂತ್ಯಗೊಂಡ ನಂತರ 15 ದಿವಸಗಳೊಳಗಾಗಿ ಇಲಾಖೆಗೆ

ಸಲ್ಲಿಸಬೇಕಾದ್ದು ಈ ಮುಖ್ಯ ಕಾರ್ಯನಿರ್ವಹಣಾಧಿಕಾರಿಯ ಕರ್ತವ್ಯವಾಗಿರುತ್ತದೆ. ಆದರೆ ಈ ಬಗ್ಗೆ ಸದರಿಯವರು ಇಲಾಖೆಗೆ ಜಮಾ-ಖರ್ಚುಗಳನ್ನು ಸಲ್ಲಿಸಿರುವುದಿಲ್ಲ. ಇದೇ ಕಲಂನ ಅವಕಾಶದಂತೆ ಪ್ರತಿ ಆಡಳಿತ ಮಂಡಳಿ ಸಭೆಗಳ ನಡವಳಿಗಳನ್ನು ಹಾಗೂ ಕಲಂ 27ರನ್ವಯ ನಡೆಸಲಾದ ಮಹಾಸಭೆಗಳ ನಡವಳಿಕೆಗಳನ್ನು ಸಭೆಗಳು ನಡೆದ 15 ದಿನಗಳೊಳಗಾಗಿ ಸಲ್ಲಿಸಬೇಕಾಗಿದ್ದು, ಇಂತಹ ನಡವಳಿಕೆಗಳಾವುದನ್ನು ಮುಖ್ಯಕಾರ್ಯನಿರ್ವಹಣಾಧಿಕಾರಿಯವರು ಇಲಾಖೆಗೆ ಸಲ್ಲಿಸಿರುವುದಿಲ್ಲ. ಅಲ್ಲದೆ ಮುಖ್ಯ ಕಾರ್ಯನಿರ್ವಹಣಾಧಿಕಾರಿಯವರು ಸಂಘದ ಸದಸ್ಯರಿಗೆ ಸಹಕಾರ ಸಂಘಗಳ ನಿಯಮ 1960ರ ನಿಯಮ 13ಎ ರ ಅವಕಾಶದಂತೆ ಭಾವಚಿತ್ರವುಳ್ಳ ಗುರುತಿನ ಚೀಟಿಗಳನ್ನು ನೀಡಿರುವುದಿಲ್ಲ.

ಮಾನ್ಯ ಉಚ್ಚ ನ್ಯಾಯಾಲಯದ ಆದೇಶದಂತೆ ಸಂಘದ ಕಾರ್ಯದರ್ಶಿಯವರು ಉಪನಿಬಂಧಕರ ಮುಂದೆ ಹಾಜರಾಗಿರುವುದಿಲ್ಲ. ಆದರೆ, ಹಾಜರಾದ ಅಧ್ಯಕ್ಷರೂ ಸಹ ಸಂಘದ ಪ್ರಮುಖ ದಾಖಲೆಗಳಾದ ಬೈಲಾ ನಗದು ಪುಸ್ತಕ, ಠರಾವು ಪುಸ್ತಕ, ಮಹಾಸಭೆ ಠರಾವು ಪುಸ್ತಕ, ವ್ಯಾಪಾರ ವಹಿವಾಟಿಗೆ ಸಂಬಂಧಿಸಿದ ಲೆಡ್ಜರ್‌ಗಳು, ಆಡಿಟ್ ವರದಿಗಳು ಇತ್ಯಾದಿ ಯಾವುದೇ ಪ್ರಮುಖ ದಾಖಲಾತಿಗಳನ್ನು ಉಪನಿಬಂಧಕರವರಿಗೆ ಪರಿಶೀಲನೆಗೆ ಹಾಜರುಪಡಿಸಿರುವುದಿಲ್ಲ. ಇದರಿಂದ ಈ ಸಂಘದ ವ್ಯವಹಾರ ನಿಯಮಾನುಸಾರ ನಡೆಸಲಾಗಿದೆಯೇ? ಎಂಬುದನ್ನು ಪರಿಶೀಲಿಸಲು ಸಾಧ್ಯವಾಗಿರುವುದಿಲ್ಲ.

ಈ ಸಂಘವು ಈ ಕೆಳಕಂಡ ಅಂಶಗಳನ್ನು ಪಾಲಿಸಬೇಕಾಗಿದ್ದು, ಇವು ಯಾವುದನ್ನೂ ಪಾಲಿಸಿರುವ ಬಗ್ಗೆ ಮಾಹಿತಿಗಳಿರುವುದಿಲ್ಲ.

1. ಈ ಸಹಕಾರ ಸಂಘವು ಜಾಯಿಂಟ್ ಡೈರೆಕ್ಟರ್ (ಗ್ರಾಮೀಣ ಕೈಗಾರಿಕೆ), ಬೆಂಗಳೂರು ಇವರಿಂದ ನೋಂದಾಯಿಸಲ್ಪಟ್ಟಿದ್ದು, ಇದರ ನೋಂದಣಿ ಸಂಖ್ಯೆ: ಜೆಡಿ:ಆರ್‌ಐ:319:1962-63, ದಿನಾಂಕ: 08.04.62 ಆಗಿರುತ್ತದೆ. ಹಾಗೂ ಇದರ ಕಾರ್ಯವ್ಯಾಪ್ತಿ ತಾಲ್ಲೂಕು ಮಟ್ಟಕ್ಕಿಂತ ಕಡಿಮೆಯಾಗಿರುತ್ತದೆ.

2. ಸಂಘದ ವಿಳಾಸ ಬದಲಾವಣೆ ಆಗಿದ್ದಲ್ಲಿ ಆ ಬಗ್ಗೆ ಸಹಕಾರ ಸಂಘಗಳ ಸಹಾಯಕ ನಿಬಂಧಕರಿಗಾಗಲೀ ಅಥವಾ ಸಹಕಾರ ಸಂಘಗಳ ಉಪ ನಿಬಂಧಕರಿಗಾಗಲೀ, ಕಛೇರಿಗಾಗಲೀ ಯಾವುದೇ ಮಾಹಿತಿ ಸಲ್ಲಿಸಿರುವುದಿಲ್ಲ.

3. ಸಂಘವು ಕರ್ನಾಟಕ ಸಹಕಾರ ಸಂಘಗಳ ಕಾಯಿದೆ, ನಿಯಮ ಹಾಗೂ ಬೈಲಾ ಪ್ರಕಾರ ಪ್ರತಿವರ್ಷ ವಾರ್ಷಿಕ ಮಹಾಸಭೆ ನಡೆಸಬೇಕಾಗಿದ್ದು, ಮಹಾಸಭೆ ನಡೆಸಿದ ಬಗ್ಗೆ ನೋಟೀಸ್ ಆಗಲೀ ಅಥವಾ ಆಡಳಿತ ವರದಿ ಇತ್ಯಾದಿ ಅಜೆಂಡಾ ಟಿಪ್ಪಣಿಯುಳ್ಳ ಪುಸ್ತಕವಾಗಲೀ ಈ ಕಛೇರಿಗಾಗಲೀ ಅಥವಾ ಸಹಾಯಕ ನಿಬಂಧಕರ ಕಛೇರಿಗಾಗಲೀ ಬಂದಿರುವುದಿಲ್ಲ.

4. ಸಂಘವು ನೋಂದಣಿಯಾದ ತರುವಾಯ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಮತ್ತು ನಿಯಮಾವಳಿಗಳಿಗೆ ಸಾಕಷ್ಟು ತಿದ್ದುಪಡಿಗಳಾಗಿದ್ದು, ತಿದ್ದುಪಡಿ ಕಾಯ್ದೆ ಮತ್ತು ನಿಯಮಾವಳಿಗಳಿಗನುಗುಣವಾಗಿ ಸಂಘದ ಬೈಲಾಗಳನ್ನು ಅಳವಡಿಸಿಕೊಳ್ಳಬೇಕಾಗಿದ್ದು, ಈ ಸಹಕಾರ ಸಂಘಗಳ ಸಹಾಯಕ ನಿಬಂಧಕರಿಗೆ ಸಲ್ಲಿಸಿರುವುದಿಲ್ಲ.

5. ಸಹಕಾರ ಸಂಘಗಳ ಕಾಯಿದೆ ಕಲಂ 28ಎ ಮತ್ತು ನಿಯಮ 14ರನ್ವಯ ಆಡಳಿತ ಮಂಡಳಿಗೆ ಚುನಾವಣೆ ಮಾಡಿರುವ ಬಗ್ಗೆಯಾಗಲೀ, ಸಹಕಾರ ಸಂಘಗಳ ಕಾಯಿದೆ ಕಲಂ 29ಎ(5) ಅಥವಾ 29ಎಫ್(7)ರ ಪ್ರಕಾರ ಚುನಾವಣೆಯಾದ ತರುವಾಯ ಪದಾಧಿಕಾರಿಗಳ ಆಯ್ಕೆಗೊಂಡ ಬಗ್ಗೆಯಾಗಲೀ ಯಾವುದೇ ಮಾಹಿತಿ ಸಲ್ಲಿಸಿರುವುದಿಲ್ಲ.

6. ಕಳೆದ ಸುಮಾರು ವರ್ಷಗಳಿಂದ ಸಂಘದ ಲೆಕ್ಕ ಪತ್ರಗಳ ಪರಿಶೋಧನೆಯಾದ ಬಗ್ಗೆ ಯಾವುದೇ ಮಾಹಿತಿ ಇರುವುದಿಲ್ಲ. ಹಾಗೂ ಲೆಕ್ಕ ಪರಿಶೋಧನೆ ವರದಿಗಳೂ ಸಹ ಲಭ್ಯವಿರುವುದಿಲ್ಲ.

7. ಸಂಘವು ಸದಸ್ಯರಿಂದ ಬರಬೇಕಾಗಿದ್ದ ಸಾಲ ವಸೂಲಾತಿಗಾಗಿ ಕಲಂ 70ರನ್ವಯ ಯಾವುದೇ ದಾವಾ ಪ್ರಕರಣವನ್ನಾಗಲೀ ಅಥವಾ ಕಲಂ 69ರ ಪ್ರಕಾರ ಅಧಿಭಾರ ಪ್ರಕರಣವನ್ನಾಗಲೀ ಈವರೆಗೂ ಸಹಕಾರ ಸಂಘಗಳ ಸಹಾಯಕರ ಮುಂದೆ ಹೂಡಿರುವುದಿಲ್ಲ.

8. ಪ್ರತಿ ವರ್ಷವೂ ಇಲಾಖೆಗೆ ವಾರ್ಷಿಕ ಅಂಕಿ-ಅಂಶ ತಃಖ್ತೆಗಳನ್ನು ಸಲ್ಲಿಸಬೇಕಾಗಿದ್ದು, ಹಲವಾರು ವರ್ಷಗಳಿಂದ ಅಂಕಿ-ಅಂಶಗಳ ತಃಖ್ತೆ ಸಲ್ಲಿಸಿರುವುದಿಲ್ಲ.

9. ಸಂಘದಲ್ಲಿ ಸದಸ್ಯರುಗಳು ಯಾರು ಯಾರು ಎಂಬ ಮಾಹಿತಿ ಇರುವುದಿಲ್ಲ. ಸಂಘದ ಲೆಕ್ಕ ಪತ್ರಗಳು ಯಾರ ಬಳಿ ಇವೆ? ಸಂಘದ ನಿರ್ದೇಶಕರು ಮತ್ತು ಪದಾಧಿಕಾರಿಗಳು ಯಾರು ಯಾರು ಮತ್ತು ಅವರ ಅವಧಿ ಎಷ್ಟು? ಎಂಬ ಮಾಹಿತಿಯು ಲಭ್ಯವಿಲ್ಲ.

10. ಸಂಘದಲ್ಲಿ ಕಾರ್ಯನಿರ್ವಹಿಸುವ ನೌಕರರುಗಳ ವೃಂದಬಲ, ಪ್ರತಿ ನೌಕರರಿಗೆ ಕೊಡಬಹುದಾದ ವೇತನ ಶ್ರೇಣಿ ಮತ್ತು ಇತರೆ ಭತ್ಯೆಗಳನ್ನು ಕರ್ನಾಟಕ ಸಹಕಾರ ಸಂಘಗಳ ನಿಯಮ 17(1)ರನ್ವಯ ಕಾಲಕಾಲಕ್ಕೆ ಇಲಾಖೆಯಿಂದ ಅನುಮೋದನೆ ಪಡೆಯಬೇಕಾಗಿದ್ದು, ಈ ಬಗ್ಗೆ ಸಂಘವು ಯಾವುದೇ ಪ್ರಸ್ತಾವ ಈವರೆವಿಗೂ ಸಲ್ಲಿಸಿರುವುದಿಲ್ಲ.

11. ಸಂಘವು ಸದಸ್ಯರುಗಳ ಏಳಿಗೆಗಾಗಿ ಕಾರ್ಯನಿರ್ವಹಿಸುತ್ತಿದೆ ಎಂಬುದರ ಬಗ್ಗೆ ಯಾವುದೇ ಸಂದರ್ಭದಲ್ಲೂ ಮಾಹಿತಿಯನ್ನು ಈ ಕಛೇರಿಗೆ ಸಲ್ಲಿಸಿರುವುದಿಲ್ಲ.

12. ಈ ಸಂಘದಲ್ಲಿ ಎಷ್ಟು ಸದಸ್ಯರಿರುತ್ತಾರೆ? ಈ ಸದಸ್ಯರು ಯಾರು? ಈ ಸಂಘದ ಸದಸ್ಯರು ಸಂಘದ ಬೈಲಾ ಅನ್ವಯ ಸಂಘವು ಕೈಗೊಂಡಿರುವ ಉತ್ಪಾದನಾ ಚಟುವಟಿಕೆಗಳಲ್ಲಿ ಭಾಗಿಯಾಗಿರುತ್ತಾರೆಯೇ? ಎಷ್ಟೆಷ್ಟು ಮಗ್ಗಗಳನ್ನು ಹೊಂದಿರುತ್ತಾರೆ? ಸಂಘದಿಂದ ಕಚ್ಚಾ ರೇಷ್ಮೆ ಕೊಂಡೊಯ್ದು ತಮ್ಮ ಮಗ್ಗಗಳಿಂದ ನೇಯ್ದು ಉತ್ಪಾದನಾ ವಸ್ತುಗಳನ್ನು ಸಂಘಕ್ಕೆ ನೀಡಿರುತ್ತಾರೆಯೇ? ಸಂಘವು ಇವರುಗಳ ಉತ್ಪಾದನೆಗೆ ಬೆಲೆ ನಿಗದಿಪಡಿಸಿ ನೀಡುತ್ತಿದೆಯೇ? ಸದಸ್ಯರು ತಮ್ಮ ಉತ್ಪಾದನೆಯನ್ನು ಸಂಘದ ಮೂಲಕ ಮಾರಾಟ ಮಾಡುತ್ತಿದ್ದಾರೆಯೇ? ಎಂಬ ಯಾವುದೇ ಮಾಹಿತಿಯು ಲಭ್ಯವಾಗಿರುವುದಿಲ್ಲ.

ಈ ಮೇಲಿನ ಅಂಶಗಳನ್ನು ಗಮನಿಸಿದಾಗ ಸಂಘವು ಕಾಯ್ದೆ, ನಿಯಮ ಮತ್ತು ಬೈಲಾಗಳನ್ವಯ ಕಾರ್ಯನಿರ್ವಹಿಸದೆ ಇದ್ದು, ಸಂಘದಲ್ಲಿ ಯಾವುದೇ ಸದಸ್ಯರು ಹಾಗೂ ನಿರ್ದೇಶಕರುಗಳು ಆಸಕ್ತಿಯಿಂದ ಸಂಘದ ಆರ್ಥಿಕ ಚಟುವಟಿಕೆಯಲ್ಲಿ ಭಾಗವಹಿಸದೆ ಇರುವುದು ಸಾಬೀತಾಗಿದೆ.

ಸಂಘದ ಅಧ್ಯಕ್ಷರು ದಿನಾಂಕ:17.01.2004ರಂದು ಒದಗಿಸಿರುವ ದಾಖಲೆಗಳ ಪೈಕಿ ಬಿಡಿ ಮತ್ತು ಬಿಆರ್‌ಡಿಸಿಸಿ ಬ್ಯಾಂಕಿನಲ್ಲಿ ವ್ಯವಹಾರ ನಡೆಸಿರುವ ಬ್ಯಾಂಕ್ ಖಾತೆ ಜೆರಾಕ್ಸ್ ಪ್ರತಿಯನ್ನು ನೀಡಿರುತ್ತಾರೆ. ಈ ಬ್ಯಾಂಕ್ ಖಾತೆಯಲ್ಲಿ ದಿನಾಂಕ:10.01.2004ರವರೆಗೆ ವ್ಯವಹರಿಸಿರುವುದು ಕಂಡುಬರುತ್ತದೆ. ಆದರೆ ಈ ವ್ಯವಹಾರದ ನೈಜತೆ ಬಗ್ಗೆ ಪರಿಶೀಲಿಸಲು ಸಂಘದ ಕಾರ್ಯದರ್ಶಿಯವರು ನಗದು ಪುಸ್ತಕವನ್ನಾಗಲೀ ಓಚರ್ ಅಥವಾ ರಸೀದಿ ಪುಸ್ತಕವನ್ನಾಗಲೀ ಪರಿಶೀಲನೆಗೆ ಒದಗಿಸಿರುವುದಿಲ್ಲ. ಈ ಸಂಘದ ಅಧ್ಯಕ್ಷರೆಂದು ಹೇಳುವ ಶ್ರೀ ಅನಂತಮೂರ್ತಿಯವರು ತಾವೇ ಒಬ್ಬ ಖಾಸಗಿ ರೇಷ್ಮೆ ಉತ್ಪಾದಕರಾಗಿದ್ದು ತಾವೊಬ್ಬರೇ ಉತ್ಪಾದಿಸುವ ಉತ್ಪನ್ನಗಳನ್ನು ಈ ಸಂಘದ ವ್ಯವಹಾರಗಳಲ್ಲಿ ತೊಡಗಿಸಿದಂತೆ ತೋರಿಸಿ ವ್ಯವಹರಿಸಿರಬಹುದಾಗಿದೆ. ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 17 (1)(ಸಿ) ಪ್ರಕಾರ ಇವರು ಇಂತಹ ಒಂದೇ ಉದ್ದೇಶ ಹೊಂದಿರುವ ಯಾವುದೇ ಸಹಕಾರ ಸಂಘದಲ್ಲಿ ಸದಸ್ಯರಾಗಲು ಅವಕಾಶವಿರುವುದಿಲ್ಲ. ಶ್ರೀ ಅನಂತಮೂರ್ತಿ ಇವರು ಇದಕ್ಕೆ ವ್ಯತಿರಿಕ್ತವಾಗಿ ತಾವು ಈ ಸಂಘದ ಸದಸ್ಯರಾಗಿದ್ದು ಈ ಸಂಘವನ್ನು ಪ್ರತಿನಿಧಿಸಿ ಕರ್ನಾಟಕ ರಾಜ್ಯ ಸಹಕಾರ ಕೈಮಗ್ಗ ನೇಕಾರರ ಮಹಾ ಮಂಡಳ ನಿ., ಬೆಂಗಳೂರು ಈ ಸಂಸ್ಥೆಯಲ್ಲಿ ಈ ಹಿಂದೆ ಅಧ್ಯಕ್ಷರಾಗಿದ್ದು ಹಾಲಿ ನಿರ್ದೇಶಕರಾಗಿ ಮುಂದುವರೆದಿರುತ್ತಾರೆ. ಅಲ್ಲದೇ ಇದೇ ಸಂಘವನ್ನು ಪ್ರತಿನಿಧಿಸಿ ಬೆಂಗಳೂರು ಜಿಲ್ಲಾ ಮತ್ತು ಬೆಂಗಳೂರು ಗ್ರಾಮಾಂತರ ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್ ನಿ., ಬೆಂಗಳೂರು ಇದರ ಹಾಲಿ ನಿರ್ದೇಶಕರಾಗಿ ಮುಂದುವರೆದಿರುತ್ತಾರೆ. ಸದರಿ ಶ್ರೀ ಅನಂತಮೂರ್ತಿಯವರು ಈ ಸಹಕಾರ ಸಂಘವನ್ನು ಪ್ರತಿನಿಧಿಸಿ ಮೇಲಿನ ಸಂಸ್ಥೆಗಳಲ್ಲಿ ಅಧಿಕಾರ ಹೊಂದುವ ಒಂದೇ ಉದ್ದೇಶದಿಂದ ಈ ಸಂಘವನ್ನು ಚಾಲ್ತಿಯಲ್ಲಿಡಲು ತಾವೊಬ್ಬರೇ ಪ್ರಯತ್ನಿಸುತ್ತಿರುವುದು ಕಂಡು ಬರುತ್ತದೆ.

ಜವಳಿ ಆಯುಕ್ತರು ಹಾಗೂ ನಿರ್ದೇಶಕರು, ಕೈಮಗ್ಗ ಮತ್ತು ಜವಳಿ ಇವರ ಪತ್ರ ಸಂಖ್ಯೆ:ಕೈಜಇ/ ಆಶಾ1/ 2001-02 ದಿನಾಂಕ: 09.07.2001ರಲ್ಲಿ ಉಪನಿರ್ದೇಶಕರು (ಜವಳಿ) ಇವರು ಸಂಘಕ್ಕೆ ಭೇಟಿ ನೀಡಿ ದಾಖಲಾತಿಗಳನ್ನು ಪರಿಶೀಲಿಸಿ ವರದಿ ನೀಡಿದ್ದು ಅದನ್ನು ಲಗತ್ತಿಸಿ ಈ ಸಂಘವು ಸಮರ್ಪಕ ದಾಖಲಾತಿಗಳನ್ನು ಹೊಂದಿದ್ದು ಅಸ್ಥಿತ್ವ ಕಾಯ್ದುಕೊಂಡಿರುವುದರಿಂದ ಈಗಾಗಲೇ ನೋಂದಣಿಯನ್ನು ರದ್ದುಪಡಿಸಿರುವ ಆದೇಶವನ್ನು ಹಿಂತೆಗೆದುಕೊಂಡು ನೋಂದಣಿಯನ್ನು ಮುಂದುವರಿಸಲು ಆದೇಶಿಸಿರುವುದಾಗಿ ಉಪನಿಬಂಧಕರಿಗೆ ಪತ್ರ ಬರೆದಿರುತ್ತಾರೆ. ಆದರೆ ನಂತರ ಬಂದ ಜವಳಿ ಅಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು, ಕೈಮಗ್ಗ ಮತ್ತು ಜವಳಿ ಹಾಗೂ ಸಹಕಾರ ಸಂಘಗಳ ಅಪರ ರಿಜಿಸ್ಟ್ರಾರ್ ಇವರು ತಮ್ಮ ಪತ್ರ ಸಂಖ್ಯೆ: ಕೈಜಇ:ಜಂಟಿ1: ಸಮಾಪನೆ:22:2000-01 ದಿನಾಂಕ:04.03.2002ರಲ್ಲಿ ಉಪನಿಬಂಧಕರಿಗೆ ಪತ್ರ ಬರೆದು ಈ ವಿಷಯವನ್ನು ಕಾನೂನಿನ ಪ್ರಕಾರ ಪರೀಕ್ಷಿಸಿ ನಡವಳಿಕೆಯನ್ನು ಕ್ರಮಪಡಿಸುವ ಸ್ವತಂತ್ರತೆಯನ್ನು ಸಹಕಾರ ಸಂಘಗಳ ಉಪ ನಿಬಂಧಕರು-1, ಬೆಂಗಳೂರು ನಗರ ಜಿಲ್ಲೆ ಇವರು ಉಳ್ಳವರಾಗಿರುತ್ತಾರೆ ಎಂದು ತಿಳಿಸಿ ಹಿಂದಿನ ದಿನಾಂಕ:09.07.2001ರ ಪತ್ರದ ವಾಕ್ಯ ಅಂದರೆ **"ಸಂಘವು ಸಮರ್ಪಕ ದಾಖಲಾತಿಗಳನ್ನು ಹೊಂದಿದ್ದು ಅಸ್ಥಿತ್ವ ಕಾಯ್ದುಕೊಂಡಿರುವುದರಿಂದ ಈಗಾಗಲೇ ನೋಂದಣಿಯನ್ನು ರದ್ದುಪಡಿಸಿರುವ ಆದೇಶವನ್ನು ಹಿಂತೆಗೆದುಕೊಂಡು ನೋಂದಣಿಯನ್ನು ಮುಂದುವರಿಸಲು ಆದೇಶಿಸಿದೆ" ಎಂಬ ವಾಕ್ಯವನ್ನು ಹಾಗೂ ಸಹಕಾರ ಸಂಘಗಳ ಉಪ ನಿಬಂಧಕರು-1 ಇವರಿಗೆ ಬರೆದ ದಿನಾಂಕ:21.07.2001ರ ಪತ್ರವನ್ನು ಹಿಂತೆಗೆದುಕೊಳ್ಳಲಾಗಿದೆ ಮತ್ತು ರದ್ದುಪಡಿಸಲಾಗಿದೆ ಎಂದು ತಿಳಿಸಿರುತ್ತಾರೆ.** ಈ ಸಂಘದ ಕಾರ್ಯವ್ಯಾಪ್ತಿಯು ತಾಲ್ಲೂಕುಮಟ್ಟಕ್ಕಿಂತ ಕಡಿಮೆ ಇದ್ದು ಇದರ ಕಾರ್ಯವೈಖರಿ ಮತ್ತು ವ್ಯವಹಾರಗಳ ಬಗ್ಗೆ ಪರಿಶೀಲನೆ ನಡೆಸುವ ಆಗು-ಹೋಗುಗಳ ಬಗ್ಗೆ ಕ್ರಮ ಕೈಗೊಳ್ಳುವ ಅಧಿಕಾರವು ಸಹಕಾರ ಸಂಘಗಳ ಸಹಾಯಕ ನಿಬಂಧಕರು, 1ನೇ ವಲಯ, ಇವರಿಗೆ ಮಾತ್ರ ದತ್ತವಾಗಿರುತ್ತದೆ. ಇಂತಹ ಅಧಿಕಾರವು ಜವಳಿ ಇಲಾಖೆಗೆ ದತ್ತವಾಗಿರುವುದಿಲ್ಲ. ಈ ಸಂಘವನ್ನು ಸಮಾಪನೆಗೊಳಿಸುವ ಹಾಗೂ ರದ್ದುಗೊಳಿಸುವ ಆದೇಶಗಳನ್ನು ಹೊರಡಿಸುವ ಅಧಿಕಾರವು ಸಹಕಾರ ಸಂಘಗಳ ಉಪನಿಬಂಧಕರು-1, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಇವರಿಗೆ ದತ್ತವಾಗಿರುತ್ತದೆ. ಜವಳಿ ಆಯುಕ್ತರ ಪತ್ರ ದಿನಾಂಕ: 04.03.2002ರ ಕಂಡಿಕೆ 6ರಲ್ಲಿ **"ಮೇಲಿನ ಎಲ್ಲಾ ವಿಷಯವನ್ನು ಸಹಕಾರ ಸಂಘಗಳ ಕಾಯಿದೆಯ ಉಪಬಂಧಗಳ ಅನ್ವಯ ಪರಿಶೀಲಿಸಿರುತ್ತದೆ. ದಿನಾಂಕ:09.07.2001 ಮತ್ತು 21.07.2001ರ ಈ ಕಛೇರಿಯಿಂದ ನೀಡಿರುವ ಪತ್ರಗಳು ಬರೀ ಆಡಳಿತಾತ್ಮಕ ಪತ್ರಗಳಾಗಿದ್ದು, ಸಹಕಾರ ಸಂಘಗಳ ಕಾಯಿದೆ ಕಲಂಗಳಡಿ ದತ್ತವಾಗಿರುವ ಯಾವುದೇ ಅಧಿಕಾರಗಳಂತೆ ನೀಡಲಾಗಿರುವ ಪತ್ರಗಳಲ್ಲ ಎಂಬುದು ನಿಜವಾಗಿದೆ. ಅಲ್ಲದೆ ಒಂದು ಸಹಕಾರ ಸಂಘದ ಕಾರ್ಯಕ್ಷೇತ್ರವು ತಾಲ್ಲೂಕು ಮಟ್ಟಕ್ಕಿಂತ ಕಡಿಮೆ ಇದ್ದಲ್ಲಿ ಅಂತಹ ಸಹಕಾರ ಸಂಘದ ಸಮಾಪನಾ ಆದೇಶವನ್ನು ಅಥವಾ ನೋಂದಣಿ ರದ್ಧತಿ ಆದೇಶವನ್ನು ರದ್ದುಪಡಿಸುವುದಕ್ಕಾಗಲೀ ಅಥವಾ ಹಿಂತೆಗೆದುಕೊಳ್ಳುವುದಕ್ಕಾಗಲೀ ಸಹಕಾರ ಸಂಘಗಳ ಕಾಯ್ದೆ ಕಲಂ 106 ಮತ್ತು 108ರಡಿ ಅಧಿಕಾರ ಪ್ರತ್ಯಾಯೋಜಿಸಲ್ಪಟ್ಟ ಪ್ರಾಧಿಕಾರಿಯು ಸಕ್ಷಮವಾಗಿರುತ್ತದೆ ಮತ್ತು ಈ ಅಧಿಕಾರಿಗಳು ಪ್ರಸ್ತುತ ಸಂಘದ ವಿಷಯದಲ್ಲಿ ಜವಳಿ ಅಭಿವೃದ್ಧಿ ಆಯುಕ್ತರಿಗೆ ದತ್ತವಾಗದೇ ಇರುವುದು ನಿಜವಾಗಿರುತ್ತದೆ. ಈ ಸಂಘಕ್ಕೆ ಸಂಬಂಧಪಟ್ಟಂತೆ ಸಹಕಾರ ಸಂಘಗಳ ಕಾಯ್ದೆ ಕಲಂ 72 ರಿಂದ 75ರಲ್ಲಿನ ಅಧಿಕಾರಿಗಳು ತಮಗೆ ದತ್ತವಾಗಿರುವುದನ್ನು ಕಲಂ 106ರಡಿ ಅಧಿಕಾರವು ಬೆಂಗಳೂರು ವಿಭಾಗದ ಸಹಕಾರ ಸಂಘಗಳ ಜಂಟಿ ರಿಜಿಸ್ಟ್ರಾರ್‌ರವರಿಗೆ ದತ್ತವಾಗಿರುವುದನ್ನು ಹಾಗೂ ಕಲಂ 108ರಡಿ ಅಧಿಕಾರವು ರಾಜ್ಯ ಸರ್ಕಾರಕ್ಕೆ ಇರುವುದನ್ನು ಗಮನಿಸಿರುತ್ತದೆ."** ಈ ಹಿನ್ನೆಲೆಯಲ್ಲಿ ಈ ಸಂಘದ ಕಾರ್ಯಚಟುವಟಿಕೆ ಆಗು-ಹೋಗುಗಳನ್ನು ಪರಿಶೀಲಿಸಿ ಶಾಸನಬದ್ಧ ಆದೇಶಗಳನ್ನು ಹೊರಡಿಸುವ ಅಧಿಕಾರವು ಉಪನಿಬಂಧಕರು-1, ಬೆಂಗಳೂರು ನಗರ ಜಿಲ್ಲೆ ಇವರಿಗೆ ದತ್ತವಾಗಿರುವುದನ್ನು ಸದರಿ ಆಯುಕ್ತರ ಪತ್ರವು ದೃಢಪಡಿಸುತ್ತದೆ.

ಈ ಸಂಘದ ವ್ಯವಹಾರಗಳನ್ನು ಪರಿಶೀಲಿಸಲು ರಿಟ್ ಅರ್ಜಿದಾರರು ಕಾಯ್ದೆ ನಿಯಮ ಮತ್ತು ಬೈಲಾಗಳನ್ವಯ ನಿರ್ವಹಿಸಬೇಕಾದ ಸಂಘದ ವ್ಯವಹಾರಗಳ ಯಾವುದೇ ಮೂಲ ದಾಖಲಾತಿಗಳನ್ನು ಪರಿಶೀಲನೆಗೆ ಒದಗಿಸಿಲ್ಲ. ಈ ಸಂಘದಲ್ಲಿ ನಡೆದಿರುವ ವ್ಯವಹಾರದ ನೈಜತೆಯನ್ನು ಪರಿಶೀಲಿಸಲು ಸಾಧ್ಯವಾಗಿರುವುದಿಲ್ಲ. ಈ ಸಂಘದ ವ್ಯವಹಾರದಲ್ಲಿ ಸದಸ್ಯರು ಸಕ್ರಿಯವಾಗಿ ಭಾಗಿಯಾಗಿರುವ ಬಗ್ಗೆ ಸಮರ್ಥ ದಾಖಲಾತಿಗಳನ್ನು ಹೊಂದಿರುವುದಿಲ್ಲ.

ಆದ್ದರಿಂದ ಈ ಸಂಘವನ್ನು ಮುಂದುವರಿಸುವುದರಿಂದ ಸಂಘದ ಸದಸ್ಯರಿಗೆ ಯಾವುದೇ ಉಪಯೋಗ ಕಂಡುಬರುವುದಿಲ್ಲ. ಈ ಹಿಂದಿನ ಆದೇಶಗಳನ್ವಯ ಈ ಸಂಘವನ್ನು ಸಮಾಪನೆಗೊಳಿಸಿರುವುದು ಮತ್ತು ನೋಂದಣಿ ರದ್ದುಪಡಿಸಿರುವುದು ಸಮರ್ಥನೀಯವೆಂದು

ಅಭಿಪ್ರಾಯಪಡಲಾಗಿದೆ. ಗೌರವ ಉಚ್ಚ ನ್ಯಾಯಾಲಯದ ಆದೇಶದಂತೆ ಸಂಘದ ಅಧ್ಯಕ್ಷರಿಗೆ ದೀರ್ಘಕಾಲ ಸಮಯ ನೀಡಿ ಈ ಸಂಘವು ಕಾರ್ಯ ನಿರತವಾಗಿದೆ ಎಂಬುದನ್ನು ಸಾಬೀತು ಮಾಡಲು ಅವಕಾಶ ನೀಡಿದಾಗ್ಯೂ ಸಹ, ಈ ಸಂಘವು ಹೊಸ ವಿಳಾಸದಲ್ಲಿ ಕಾರ್ಯನಿರತವಾಗಿದೆ ಎಂಬುದು ದೃಢಪಡಿಸುವುದು ಸಾಧ್ಯವಾಗಿರುವುದಿಲ್ಲ.

ಆದ್ದರಿಂದ ಈ ಸಂಘವನ್ನು ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 72ಎ ರನ್ವಯ ಸಮಾಪನೆಗೊಳಿಸಿ ಸಮಾಪಕರನ್ನು ನೇಮಕ ಮಾಡುವುದು ಸೂಕ್ತವೆಂದು ಅಭಿಪ್ರಾಯಪಟ್ಟು ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಮೇಲಿನ ಪ್ರಸ್ತಾವನೆಯಲ್ಲಿ ತಿಳಿಸಿರುವ ವಾಸ್ತವಾಂಶಗಳ ಹಿನ್ನೆಲೆಯಲ್ಲಿ ಕೆ.ಎ. ಕುಮಾರ್, ಸಹಕಾರ ಸಂಘಗಳ ಉಪನಿಬಂಧಕರು-1, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಆದ ನಾನು ಸರ್ಕಾರದ ಆದೇಶ ಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್ಎಂ:2001 ದಿನಾಂಕ: 21.11.2001ರಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 72ಎ ರನ್ವಯ ಚಿಕ್ಕಪೇಟೆ ಶ್ರೀ ಸ್ವಕುಳಸಾಳಿ ರೇಷ್ಮೆ ಕೈಮಗ್ಗದವರ ಸಹಕಾರ ಸಂಘ ನಿ., ನಂ.10, 1ನೇ ಮುಖ್ಯರಸ್ತೆ, ಸುಧಾಮನಗರ, ಬೆಂಗಳೂರು-27 ಈ ಸಂಘವನ್ನು ಸಮಾಪನೆಗೊಳಿಸಿ ಸಮಾಪಕರನ್ನಾಗಿ ಸಹಕಾರ ಸಂಘಗಳ ನಿರೀಕ್ಷಕರು, ದಕ್ಷಿಣ-1, ಸಹಕಾರ ಸಂಘಗಳ ಸಹಾಯಕ ನಿಬಂಧಕರವರ ಕಛೇರಿ, ಒಂದನೇ ವಲಯ, ಬೆಂಗಳೂರು ಇವರನ್ನು ಹೆಚ್ಚುವರಿ ಪ್ರಭಾರದಲ್ಲಿ ನೇಮಿಸಿರುತ್ತೇನೆ.

ಸಮಾಪಕರು ಕೂಡಲೇ ಪ್ರಭಾರವಹಿಸಿಕೊಂಡು ಈ ಕಛೇರಿಗೆ ವರದಿಮಾಡುವುದು.

ಸಮಾಪಕರು, ಕರ್ನಾಟಕ ಸಹಕಾರ ಸಂಘಗಳ ಕಾಯಿದೆ ನಿಯಮ ಮತ್ತು ಈ ಕಛೇರಿಯ ನಿರ್ದೇಶನ/ ಸುತ್ತೋಲೆಗಳಿಗನುಸಾರವಾಗಿ ಸಂಘದ ಆಸ್ತಿ ಜವಾಬ್ದಾರಿಗಳ ವಿಲೇವಾರಿಗೆ ಕ್ರಮತೆಗೆದುಕೊಳ್ಳತಕ್ಕದ್ದು.

ಈ ಆದೇಶವನ್ನು ನನ್ನ ಸಹಿ ಮತ್ತು ಕಛೇರಿ ಮೊಹರಿನೊಂದಿಗೆ ದಿನಾಂಕ:05.07.2004 ರಂದು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಉಪ ನಿಬಂಧಕರು-1,
ಬೆಂಗಳೂರು ನಗರ ಜಿಲ್ಲೆ.

ಪಿ.ಆರ್. 1066

**ಸಹಕಾರ ಸಂಘಗಳ ಅಪರ ನಿಬಂಧಕರು (ಕೈಗಾರಿಕೆ ಮತ್ತು ಇತರೆ) ಕರ್ನಾಟಕ ರಾಜ್ಯ ಸಹಕಾರ ಸಂಘಗಳ ನಿಬಂಧಕರ ಕಛೇರಿ, ಬೆಂಗಳೂರು-52 ಇವರ ನಡವಳಿಗಳು**

**ಸಂಖ್ಯೆ: ಆರ್‌ಸಿಎಸ್: ಎಲ್‌ಕ್ಯೂಡಿ:04:04-05, ದಿನಾಂಕ:19ನೇ ಜುಲೈ, 2004**

**ವಿಷಯ :** ನಿಷ್ಕ್ರಿಯಗೊಂಡ ಡಾ: ಅಂಬೇಡ್ಕರ್ ಪರಿಶಿಷ್ಟ ಜಾತಿ ಅಭಿವೃದ್ಧಿ ಸಹಕಾರ ಸಂಘ ನಿ, ಬ್ರಹ್ಮಾವರ ಈ ಸಹಕಾರ ಸಂಘವನ್ನು ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ :**
1. ಸ.ಸಂ. ಜಂಟಿ ನಿಬಂಧಕರು, ಮೈಸೂರು ಪ್ರಾಂತ, ಮೈಸೂರು ಇವರ ಪತ್ರ ಸಂ: ಜೆಆರ್‌ಎಂ:ಬಿ2: ಸಮಾಪನೆ:77:04-05 ದಿನಾಂಕ: 31.05.2004.
2. ಸ.ಸಂ. ಉಪನಿಬಂಧಕರು, ಉಡುಪಿ ಜಿಲ್ಲೆ, ಉಡುಪಿ ಇವರ ಪತ್ರ ಸಂಖ್ಯೆ: ಡಿಆರ್‌ಪಿ:ಉ: ಸಮಾಪನೆ: ಪ.ಜಾ. ಅ.ಸ.ಸಂ.1: 03-04 ದಿನಾಂಕ:08.03.2004.
3. ಅಧ್ಯಕ್ಷರು, ಡಾ: ಅಂಬೇಡ್ಕರ್ ಪರಿಶಿಷ್ಟ ಜಾತಿ ಅಭಿವೃದ್ಧಿ ಸಹಕಾರ ಸಂಘ ನಿ, ಇವರ ಪತ್ರ ದಿನಾಂಕ:03.03.2004.

**ಪೀಠಿಕೆ:**

ಉಲ್ಲೇಖ (1)ರಲ್ಲಿ ಕೋರಿರುವಂತೆ ನಿಷ್ಕ್ರಿಯಗೊಂಡ ಡಾ: ಅಂಬೇಡ್ಕರ್ ಪರಿಶಿಷ್ಟ ಜಾತಿ ಅಭಿವೃದ್ಧಿ ಸಹಕಾರ ಸಂಘ ನಿ., ಬ್ರಹ್ಮಾವರ ಈ ಸಂಘವನ್ನು ಸಹಕಾರ ಸಂಘಗಳ ಜಂಟಿ ನಿಬಂಧಕರು, ಮೈಸೂರು ಪ್ರಾಂತ, ಮೈಸೂರು ರವರ ನೋಂದಣಿ ಸಂಖ್ಯೆ: ಜೆಆರ್‌ಎಂ: ಆರ್‌ಡಿಎಸ್:694: ದಿನಾಂಕ:27.02.1975ರಂತೆ ನೋಂದಣಿಯಾಗಿದೆ. ಸಂಘದ ಕಾರ್ಯವ್ಯಾಪ್ತಿಯು ಮಂಗಳೂರು ಮತ್ತು ಉಡುಪಿ ಜಿಲ್ಲೆಗಳಿಗೆ ಸೀಮಿತವಾಗಿದೆ.

ಸದರಿ ಸಂಘವು ತನ್ನ ಬೈಲಾ ರೀತ್ಯಾ ಕಾರ್ಯನಿರ್ವಹಿಸದೇ ನಿಷ್ಕ್ರಿಯವಾಗಿದೆ ಹಾಗೂ ವಾರ್ಷಿಕ ಮಹಾಸಭೆಯನ್ನು ಜರುಗಿಸಿರುವುದಿಲ್ಲ. ಸಂಘದ ಕಾರ್ಯದರ್ಶಿಯವರು ದಿನಾಂಕ:03.03.2004ರ ಪತ್ರದಲ್ಲಿ ನಿರ್ದೇಶಕರು ಆಸಕ್ತಿ ತೋರಿಸದ ಕಾರಣ ಸಂಘವನ್ನು ಸಮಾಪನೆಗೊಳಿಸಲು ಆಡಳಿತ ಮಂಡಳಿ ನಿರ್ಣಯ ಕೈಗೊಳ್ಳಲು ಸಾಧ್ಯವಾಗಿಲ್ಲವೆಂದು ತಿಳಿಸಿರುತ್ತಾರೆ. ಇದರಿಂದ ಸಂಘದ ಸದಸ್ಯರಿಗಾಗಲಿ ಸಾರ್ವಜನಿಕರಿಗಾಗಲಿ ಯಾವುದೇ ಪ್ರಯೋಜನ ಇರುವುದಿಲ್ಲ. ಅಲ್ಲದೆ ಸಂಘದ ಆಡಳಿತ ಮಂಡಳಿ ಸದಸ್ಯರು ಸಂಘವನ್ನು ಮುಂದುವರೆಸಿಕೊಂಡು ಹೋಗುವುದಕ್ಕಾಗಲಿ ಪುನಃಶ್ಚೇತನಗೊಳಿಸುವುದಕ್ಕಾಗಲೀ ಆಸಕ್ತಿ ತೋರಿರುವುದಿಲ್ಲ ಎಂದು ಸಹಕಾರ ಸಂಘಗಳ ಉಪನಿಬಂಧಕರು, ಉಡುಪಿ ಇವರು ತಿಳಿಸುತ್ತಾ ಸಂಘವನ್ನು ಸಮಾಪನೆಗೊಳಿಸಲು ಶಿಫಾರಸ್ಸು ಮಾಡಿರುತ್ತಾರೆ.

ಈ ಅಂಶಗಳನ್ನು ಪರಿಶೀಲಿಸಿ ಪರಿಗಣಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಆದೇಶ**

ಪೀಠಿಕೆಯಲ್ಲಿ ತಿಳಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬಿ. ನಾಗರಾಜ, ಸಹಕಾರ ಸಂಘಗಳ ಅಪರ ನಿಬಂಧಕರು (ಕೈಗಾರಿಕೆ ಮತ್ತು ಇತರೆ) ಕೇಂದ್ರ ಕಛೇರಿ, ಬೆಂಗಳೂರು ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(2) ರೀತ್ಯಾ ದತ್ತವಾಗಿರುವ ಅಧಿಕಾರದನ್ವಯ ಅಂಬೇಡ್ಕರ್ ಪರಿಶಿಷ್ಟ ಜಾತಿ ಅಭಿವೃದ್ಧಿ ಸಹಕಾರ ಸಂಘ ನಿ., ಬ್ರಹ್ಮಾವರ ಈ ಸಂಘವನ್ನು ಸಮಾಪನೆಗೊಳಿಸಿ, ಆದೇಶ

ಹೊರಡಿಸಿರುತ್ತೇನೆ ಮತ್ತು ಸಹಕಾರ ಸಂಘಗಳ ಕಾಯ್ದೆ ಕಲಂ 73ರ ಪ್ರಕಾರ ಸಹಕಾರ ಸಂಘಗಳ ಹಿರಿಯ ನಿರೀಕ್ಷಕರು ಸಹಕಾರ ಸಂಘಗಳ ಉಪನಿಬಂಧಕರ ಕಛೇರಿ, ಉಡುಪಿ ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಿಸಿರುತ್ತೇನೆ.

ಸಮಾಪನಾಧಿಕಾರಿಗಳು ಸಂಘದ ಪ್ರಭಾರವನ್ನು ಆದೇಶ ಹೊರಡಿಸಿದ ದಿನಾಂಕದ ಒಂದು ವಾರದೊಳಗಾಗಿ ವಹಿಸಿಕೊಂಡು ಪ್ರಭಾರ ಪಟ್ಟಿಯ ಪ್ರತಿಯನ್ನು ಈ ಕಛೇರಿಗೆ ಸಲ್ಲಿಸತಕ್ಕದ್ದು. ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 74 ಮತ್ತು ನಿಯಮ 33ರಂತೆ ಸಮಾಪನಾಧಿಕಾರಿಯು ಕರ್ತವ್ಯ ನಿರ್ವಹಿಸತಕ್ಕದ್ದು ಹಾಗೂ ಸಂಘದ ಇತ್ತೀಚಿನ ಲೆಕ್ಕಪರಿಶೋಧನಾ ವರದಿಯ ಆಧಾರದ ಮೇಲೆ ಆದ್ಯತಾ ಪಟ್ಟಿಯನ್ನು ತಯಾರಿಸಿ, ಈ ಕಛೇರಿಯ ಅನುಮೋದನೆ ಪಡೆದು, ಆಸ್ತಿ, ಜವಾಬ್ದಾರಿಗಳನ್ನು ತ್ವರಿತವಾಗಿ ವಿಲೇವಾರಿ ಮಾಡಿ, ಸಂಘದ ನೋಂದಣಿ ಕ್ರಮಾಂಕವನ್ನು ರದ್ದುಗೊಳಿಸಲು ಸೂಕ್ತ ಕ್ರಮ ಜರುಗಿಸುವುದು.

ಈ ಆದೇಶವನ್ನು ಸ್ವಸಹಿ ಮತ್ತು ಕಛೇರಿಯ ಮೊಹರು ನಿಶಿಯೊಂದಿಗೆ ಈ ದಿನಾಂಕ: 19.07.2004ರಂದು ಹೊರಡಿಸಲಾಗಿದೆ.

ಸಹಕಾರ ಸಂಘಗಳ ಅಪರ ನಿಬಂಧಕರು,
(ಕೈಗಾರಿಕೆ ಮತ್ತು ಇತರೆ).

ಪಿ.ಆರ್. 1067

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಂಯುಕ್ತ ನಿಬಂಧಕರ ಕಾರ್ಯಾಲಯ, ಬೆಂಗಳೂರು ಪ್ರಾಂತ, ಬೆಂಗಳೂರು**

**ಸಂಖ್ಯೆ: ಜೆಆರ್‌ಬಿ:ಎಲ್‌ಕ್ಯೂಡಿ:04:ಎಲ್‌ಎಂಸಿ:03-04, ದಿನಾಂಕ:3ನೇ ಜುಲೈ, 2004**

**ವಿಷಯ :** ಸಮಾಪನೆಯಲ್ಲಿರುವ ಚಿತ್ರದುರ್ಗ ತಾಲ್ಲೂಕು ರೇಷ್ಮೆ ಬೆಳೆಗಾರರ ವಿವಿಧೋದ್ದೇಶ ಸಹಕಾರ ಸಂಘ ನಿಯಮಿತ, ಚಿತ್ರದುರ್ಗ ಇದರ ನೋಂದಣಿ ರದ್ದತಿ ಬಗ್ಗೆ.

**ಉಲ್ಲೇಖ :** 1. ಈ ಕಛೇರಿ ಆದೇಶ ಸಮ ಸಂಖ್ಯೆ: ದಿನಾಂಕ:05.11.2003

2. ಸಹಕಾರ ಸಂಘಗಳ ಉಪನಿಬಂಧಕರು ಚಿತ್ರದುರ್ಗ ಇವರ ಪ್ರಸ್ತಾವೆ ಸಂಖ್ಯೆ: ಡಿಆರ್‌ಡಿ:ಎಲ್‌ಕ್ಯೂಡಿ: ಸಿಆರ್-5:04-05 ದಿನಾಂಕ:19.06.2004.

**ಪ್ರಸ್ತಾವನೆ:**

ಚಿತ್ರದುರ್ಗ ತಾಲ್ಲೂಕು ರೇಷ್ಮೆ ಬೆಳೆಗಾರರ ವಿವಿಧೋದ್ದೇಶ ಸಹಕಾರ ಸಂಘ ನಿಯಮಿತ, ಚಿತ್ರದುರ್ಗ, ಈ ಸಹಕಾರ ಸಂಘವು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ರೀತ್ಯಾ ಸಹಕಾರ ಸಂಘಗಳ ಉಪನಿಬಂಧಕರು, ಚಿತ್ರದುರ್ಗ, ಇವರ ಕಾರ್ಯಾಲಯದಲ್ಲಿ ಸಂಖ್ಯೆ: ಡಿಆರ್‌ಡಿ: ಆರ್‌ಎಸ್‌ಆರ್ 9711:93-94, ದಿನಾಂಕ:15.01.1994 ರೀತ್ಯಾ ನೋಂದಾವಣೆಯಾಗಿದ್ದು, ಸಂಘವು ತನ್ನ ನೋಂದಣಿ ಉದ್ದೇಶಕ್ಕೆ ಪೂರಕವಾಗಿ ಕಾರ್ಯನಿರ್ವಹಿಸದೇ ಸ್ಥಗಿತಗೊಂಡಿರುವುದನ್ನು ಗಮನಿಸಿ, ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(ಬಿ) ಅನ್ವಯ ಉಲ್ಲೇಖ(1)ರ ಆದೇಶದಲ್ಲಿ ಸಮಾಪನೆಗೊಳಿಸಲಾಗಿದ್ದು, ಸಹಕಾರ ಸಂಘಗಳ ನಿರೀಕ್ಷಕರು, ಸಹಾಯಕ ನಿಬಂಧಕರ ಕಾರ್ಯಾಲಯ, ಚಿತ್ರದುರ್ಗ ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕಗೊಳಿಸಲಾಗಿದೆ.

ನೇಮಕಗೊಂಡ ಸಮಾಪನಾಧಿಕಾರಿಯವರು ದಿನಾಂಕ:05.01.2004 ರಂದು ಸಂಘದ ಪ್ರಭಾರವನ್ನು ಪಡೆದಿದ್ದು, ದಿನಾಂಕ: 31.05.2004ರಲ್ಲಿ ಸಮಾಪನಾಧಿಕಾರಿಗಳ ಸಭೆ ನಡೆಸಿ ಸಂಘದ ಆಸ್ತಿ ಜವಾಬ್ದಾರಿಯನ್ನು ವಿಲೇಗೊಳಿಸಲು ತೀರ್ಮಾನ ಕೈಗೊಂಡಿರುತ್ತಾರೆ.

ಅದರನ್ವಯ, ಸಂಘದ ಲೆಕ್ಕಪರಿಶೋಧನೆಯು 2002-03 ನೇ ಸಾಲಿನವರೆಗೆ ನಡೆದಿದ್ದು, ದಿನಾಂಕ:31.03.2003ರ ಅಂತ್ಯಕ್ಕೆ ರೂ. 27,325/-ಗಳ ನಿವ್ವಳ ನಷ್ಟ ಹೊಂದಿರುತ್ತದೆ. ಸಂಘದ ಸದಸ್ಯರಿಗೆ ರೂ. 27,500/- ಗಳ ಷೇರುಧನವನ್ನು ವಾಪಸ್ಸು ಮಾಡಲು ಬಾಕಿಯಿದ್ದು, ಇದಕ್ಕೆ ರಹವಿಲ್ಲದಿರುವುದರಿಂದ ಹೊಂದಾಣಿಕೆ ಮುಖಾಂತರ ಶೂನ್ಯಗೊಳಿಸಲು ತೀರ್ಮಾನಿಸಿದ್ದಾರೆ. ಹಾಗೂ ಸಂಘದ ಯಾವ ಆಸ್ತಿ ಜವಾಬ್ದಾರಿಗಳನ್ನು ವಿಲೇವಾರಿ ಮಾಡಲು ರಹವಿಲ್ಲದ ಕಾರಣ ಹೊಂದಾಣಿಕೆ ಲೆಕ್ಕದ ಮುಖಾಂತರ ವಿಲೇಗೊಳಿಸಲು ತೀರ್ಮಾನಿಸಿ, ಸಂಘದ ನೋಂದಣಿ ರದ್ದುಗೊಳಿಸುವಂತೆ ಕೋರಲು ತೀರ್ಮಾನ ಕೈಗೊಂಡಿದ್ದಾರೆ. ಇದನ್ನು ಪುಷ್ಟೀಕರಿಸಿರುವ ಉಪನಿಬಂಧಕರು, ಚಿತ್ರದುರ್ಗ ಇವರು ಸಂಘದ ನೋಂದಣಿ ಸಂಖ್ಯೆಯನ್ನು ರದ್ದುಗೊಳಿಸಬೇಕೆಂದು ಶಿಫಾರಸ್ಸು ಮಾಡಿದ್ದಾರೆ.

ಪ್ರಸ್ತಾವೆಯನ್ನು ಪರಿಶೀಲಿಸಲಾಗಿ, ಸಂಘದಲ್ಲಿ ಸರ್ಕಾರದ ವಿನಿಯೋಗಗಳೇನು ಇಲ್ಲದ ಕಾರಣ ಹಾಗೂ ಸಂಘದ ಆಸ್ತಿ ಜವಾಬ್ದಾರಿಯನ್ನು ತೀರಿಸಲು ರಹವಿಲ್ಲದೇ ಹೊಂದಾಣಿಕೆ ಮುಖಾಂತರ ಶೂನ್ಯ ಅಡಾವೆ ಪತ್ರಿಕೆಯನ್ನು ತಯಾರಿಸಿ ಸಲ್ಲಿಸಿರುವ ಕಾರಣ ಸಂಘವನ್ನು ಸಮಾಪನಾವಸ್ಥೆಯಲ್ಲಿ ಮುಂದುವರೆಸುವುದರಿಂದ ಸಂಘದ ಸದಸ್ಯರಿಗಾಗಲೀ ಸಾರ್ವಜನಿಕರಿಗಾಗಲೀ ಯಾವ ಪ್ರಯೋಜನವೂ ಇಲ್ಲದಿರುವುದನ್ನು ಮನಗಂಡು ಸಂಘದ ನೋಂದಣಿ ಸಂಖ್ಯೆಯನ್ನು ರದ್ದುಗೊಳಿಸುವುದು ಸೂಕ್ತವೆಂದು ಪರಿಗಣಿಸಲಾಗಿದ್ದು ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಆದೇಶ**

ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 75ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್‌ಎಂ:2001, ದಿನಾಂಕ:21.11.2001ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ ಬಸವೇಗೌಡ, ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು, ಆದ ನಾನು ಸಮಾಪನೆಯಲ್ಲಿರುವ ಚಿತ್ರದುರ್ಗ ತಾಲ್ಲೂಕು ರೇಷ್ಮೆ ಬೆಳೆಗಾರರ ವಿವಿಧೋದ್ದೇಶ ಸಹಕಾರ ಸಂಘ ನಿಯಮಿತ, ಚಿತ್ರದುರ್ಗ, ಈ ಸಹಕಾರ ಸಂಘದ ನೋಂದಣಿ ಸಂಖ್ಯೆ: ಡಿಆರ್‌ಡಿ:ಆರ್‌ಎಸ್‌ಆರ್:9711:93-94, ದಿನಾಂಕ: 15.01.1994ನ್ನು ರದ್ದುಪಡಿಸಿ ಆದೇಶ ಹೊರಡಿಸಿರುತ್ತೇನೆ.

ಈ ಆದೇಶದ ದಿನಾಂಕದಿಂದ ಸಂಘವು ತನ್ನ ಅಸ್ಥಿತ್ವವನ್ನು ಸಂಪೂರ್ಣವಾಗಿ ಕಳೆದುಕೊಂಡಿದೆಯೆಂದೂ, ವಿಸರ್ಜಿಸಲ್ಪಟ್ಟಿದೆಯೆಂದೂ ಪರಿಗಣಿಸತಕ್ಕದ್ದು. ಸಂಘದ ದಾಖಲಾತಿಗಳನ್ನು ನಿಯಮಾನುಸಾರ ಈ ಆದೇಶದ ದಿನಾಂಕದಿಂದ 3 ವರ್ಷಗಳವರೆಗೆ ಸಹಾಯಕ ನಿಬಂಧಕರು, ಚಿತ್ರದುರ್ಗ ಅವರ ಕಾರ್ಯಾಲಯದಲ್ಲಿ ಕಾಯ್ದಿರಿಸತಕ್ಕದ್ದು.

ಈ ಆದೇಶವನ್ನು ಈ ದಿನ ದಿನಾಂಕ:3ನೇ ಜುಲೈ 2004 ರಂದು ಸ್ವ ಸಹಿ ಹಾಗೂ ಕಛೇರಿ ಮುದ್ರೆಯೊಂದಿಗೆ ಹೊರಡಿಸಲಾಗಿದೆ.

ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು,

ಪಿ.ಆರ್. 1068 ಬೆಂಗಳೂರು ಪ್ರಾಂತ, ಬೆಂಗಳೂರು.

## ಸಹಕಾರ ಇಲಾಖೆ

### ಸಹಕಾರ ಸಂಘಗಳ ಉಪನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ರವರ ಕಾರ್ಯಾಲಯ

**ಸಂಖ್ಯೆ: ಡಿಆರ್ಎಸ್/ ಸಮಾಪನೆ/ಡಿಎಲ್ಎಸ್/ 55 /2003-04, 551, ದಿನಾಂಕ:30ನೇ ಜೂನ್, 2004**

**ವಿಷಯ :** ಸಮಾಪನಾ ಆದೇಶಿತ ಹಾಲು ಉತ್ಪಾದಕರ ಸ.ಸಂ.ನಿ., ಕಾನ್ಲೆ ಸಾಗರ ತಾ: ಇದರ ನೋಂದಣಿ ರದ್ಧತಿ ಬಗ್ಗೆ.

**ಉಲ್ಲೇಖ :** 1. ಈ ಕಛೇರಿಯ ಆದೇಶ ಸಂಖ್ಯೆ:ಡಿಆರ್ಎಸ್/ ಸಮಾಪನೆ/ ಡಿಎಲ್ಎಸ್/ 55/ 2003-04, ದಿನಾಂಕ:31.01.2004.

2. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ಇವರ ಪತ್ರ ನಂ.ಎಆರ್-25/ ನೊಂದಣಿ/ ರದ್ಧತಿ/ 44/ 2003-04 ದಿನಾಂಕ: 23.06.2004.

ಹಾಲು ಉತ್ಪಾದಕರ ಸ.ಸಂ. ನಿ., ಕಾನ್ಲೆ ಸಾಗರ ತಾಲ್ಲೂಕು ಈ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ರವರ ಕಾರ್ಯಾಲಯದ ನೊಂದಣಿ ಸಂಖ್ಯೆ: 16313/ 90-91: ದಿನಾಂಕ: 18.01.91 ರಲ್ಲಿ ನೊಂದಣಿಯಾಗಿದ್ದು, ಈ ಸಂಘದ ಕಾರ್ಯವ್ಯಾಪ್ತಿಯು 12 ಗ್ರಾಮಗಳಿಗೆ ಸೀಮಿತವಾಗಿರುತ್ತದೆ. ಈ ಸಂಘವು ತನ್ನ ಕಾರ್ಯಾಚರಣೆಯನ್ನು ಸ್ಥಗಿತಗೊಳಿಸಿದ್ದರಿಂದ ಉಲ್ಲೇಖ (1)ರ ಈ ಕಛೇರಿಯ ಆದೇಶದಲ್ಲಿ ಸಮಾಪನೆಗೆ ಆದೇಶಿಸಿದ್ದು, ಶ್ರೀ ಕೆ.ಎಸ್. ಮಂಜಪ್ಪ, ಪ್ರಭಾರ ನಿರೀಕ್ಷಕರು, ಸಾಗರ ಇವರನ್ನು ಸಮಾಪನಾಧಿಕಾರಿಯಾಗಿ ನೇಮಕ ಮಾಡಿದೆ. ಸಮಾಪನಾಧಿಕಾರಿಯವರು ದಿನಾಂಕ:10.03.2004ರಂದು ಪ್ರಭಾರ ವಹಿಸಿಕೊಂಡು ಚರಾಸ್ತಿಯನ್ನು ವಿಲೇ ಮಾಡಿ ಸಂಘದ ಆಸ್ತಿ ಜವಾಬ್ದಾರಿಯನ್ನು ಶೂನ್ಯಗೊಳಿಸಿರುತ್ತಾರೆ. ಈ ಸಂಘದಲ್ಲಿ ಸರ್ಕಾರದ ಪಾಲು ಏನೂ ಇರುವುದಿಲ್ಲವೆಂದು ಮತ್ತು ಸ್ಥಿರಾಸ್ತಿ ಇಲ್ಲವೆಂದು ವರದಿ ಮಾಡಿ ದಿನಾಂಕ: 19.06.2004ರಂದು ಅಂತಿಮ ಸಭೆ ನಡೆಸಿರುತ್ತಾರೆ. ಈ ಹಿನ್ನೆಲೆಯಲ್ಲಿ ಸಾಗರ ಉಪ-ವಿಭಾಗದ ಸಹಾಯಕ ನಿಬಂಧಕರು, ಉಲ್ಲೇಖ (2)ರ ಪತ್ರದಲ್ಲಿ ನೊಂದಣಿ ರದ್ಧತಿಗಾಗಿ ಶಿಫಾರಸ್ಸು ಮಾಡಿರುತ್ತಾರೆ.

ಸಾಗರ ಉಪ-ವಿಭಾಗದ ಸಹಕಾರ ಸಂಘಗಳ ಸಹಾಯಕ ನಿಬಂಧಕರ ಉಲ್ಲೇಖ (2)ರಲ್ಲಿಯ ಶಿಫಾರಸ್ಸು ಅನ್ವಯ ಮತ್ತು ಸರ್ಕಾರದ ವಿನಿಯೋಗಗಳು ಇಲ್ಲದ ಪ್ರಯುಕ್ತ ಹಾಗೂ ಆಸ್ತಿ ಜವಾಬ್ದಾರಿ ಶೂನ್ಯವಾಗಿರುವ ಕಾರಣ, ಈ ಸಂಘದ ಅಸ್ತಿತ್ವದಿಂದ ಸದಸ್ಯರಿಗಾಗಲೀ, ಸಾರ್ವಜನಿಕರಿಗಾಗಲೀ ಪ್ರಯೋಜನವಿಲ್ಲವೆಂದು ಮನಗಂಡು, ಸಂಘದ ನೊಂದಣಿಯನ್ನು ರದ್ದುಗೊಳಿಸುವುದು ಸೂಕ್ತವೆಂದು ಪರಿಗಣಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 75ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್ಎಂ:2000, ದಿನಾಂಕ:21.11.2001ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಕೆ. ಈಶ್ವರಸ್ವಾಮಿ, ಸಹಕಾರ ಸಂಘಗಳ ಉಪ-ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಆದ ನಾನು ಹಾಲು ಉತ್ಪಾದಕರ ಸಹಕಾರ ಸಂಘ ನಿ., ಕಾನ್ಲೆ, ಸಾಗರ ತಾಲ್ಲೂಕು ಇದರ ನೋಂದಣಿ ಸಂಖ್ಯೆ:16313/90-91/ ದಿನಾಂಕ:18.01.91ನ್ನು ತಕ್ಷಣ ಜಾರಿಗೆ ಬರುವಂತೆ ರದ್ದುಗೊಳಿಸಿ, ಆದೇಶಿಸಿರುತ್ತೇನೆ.

ಈ ಆದೇಶದ ದಿನಾಂಕದಿಂದ ಈ ಸಂಘವು ಸಂಪೂರ್ಣವಾಗಿ ತನ್ನ ಅಸ್ತಿತ್ವವನ್ನು ಕಳೆದುಕೊಂಡಿದೆ ಎಂದು ಪರಿಗಣಿಸತಕ್ಕದ್ದು. ಈ ಸಂಘದ ದಾಖಲಾತಿಗಳನ್ನು 3 ವರ್ಷಗಳ ಅವಧಿಗೆ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ರವರ ಕಛೇರಿಯಲ್ಲಿ ಕಾಯ್ದಿರಿಸತಕ್ಕದ್ದು.

ಈ ಆದೇಶವನ್ನು ಈ ದಿನ ದಿನಾಂಕ:30ನೇ ಜೂನ್ 2004 ರಂದು ನನ್ನ ಸ್ವಸಹಿ ಮತ್ತು ಕಛೇರಿ ಮುದ್ರೆಯೊಂದಿಗೆ ಹೊರಡಿಸಿದೆ.

ಸಹಕಾರ ಸಂಘಗಳ ಉಪ-ನಿಬಂಧಕರು,

ಪಿ.ಆರ್. 1069 ಶಿವಮೊಗ್ಗ.

## ಸಹಕಾರ ಇಲಾಖೆ

### ಸಹಕಾರ ಸಂಘಗಳ ಉಪನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ರವರ ಕಾರ್ಯಾಲಯ

**ಸಂಖ್ಯೆ: ಡಿಆರ್ಎಸ್/ ಸಮಾಪನೆ/ಡಿಎಲ್ಎಸ್/ 85 /2001-02, 552, ದಿನಾಂಕ:30ನೇ ಜೂನ್, 2004**

**ವಿಷಯ :** ಸಮಾಪನಾ ಆದೇಶಿತ ಹಾಲು ಉತ್ಪಾದಕರ ಸ.ಸಂ.ನಿ., ಬುಕ್ಲಾಪುರ ತೀರ್ಥಹಳ್ಳಿ ತಾ: ಇದರ ನೊಂದಣಿ ರದ್ಧತಿ ಬಗ್ಗೆ.

**ಉಲ್ಲೇಖ :** 1. ಈ ಕಛೇರಿಯ ಆದೇಶ ಸಂಖ್ಯೆ:ಡಿಆರ್ಎಸ್/ಸಮಾಪನೆ/ಡಿಎಲ್ಎಸ್/ 85/ 2001-03, ದಿನಾಂಕ:15.12.2001.

2. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಇವರ ಪತ್ರ ನಂ.ಎಆರ್-24/ ನೊಂದಣಿ/ ರದ್ಧತಿ/ 446/ 2004-05 ದಿನಾಂಕ: 28.06.2004.

ಹಾಲು ಉತ್ಪಾದಕರ ಸ.ಸಂ. ನಿ., ಬುಕ್ಲಾಪುರ ತೀರ್ಥಹಳ್ಳಿ ತಾಲ್ಲೂಕು ಈ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ರವರ ಕಾರ್ಯಾಲಯದ ನೊಂದಣಿ ಸಂಖ್ಯೆ: 26280/99-2000: ದಿನಾಂಕ: 11.06.99ರಲ್ಲಿ ನೊಂದಣಿಯಾಗಿದ್ದು, ಈ ಸಂಘದ ಕಾರ್ಯವ್ಯಾಪ್ತಿಯು ಬುಕ್ಲಾಪುರ ಗ್ರಾಮಕ್ಕೆ ಸೀಮಿತವಾಗಿರುತ್ತದೆ. ಈ ಸಂಘವು ತನ್ನ ಕಾರ್ಯಾಚರಣೆಯನ್ನು ಸ್ಥಗಿತಗೊಳಿಸಿದ್ದರಿಂದ ಉಲ್ಲೇಖ (1)ರ ಈ ಕಛೇರಿಯ ಆದೇಶದಲ್ಲಿ ಸಮಾಪನೆಗೆ ಆದೇಶಿಸಿದ್ದು, ಸಹಕಾರ ಅಭಿವೃದ್ಧಿ ಅಧಿಕಾರಿ, ತೀರ್ಥಹಳ್ಳಿ ಇವರನ್ನು ಸಮಾಪನಾಧಿಕಾರಿಯಾಗಿ ನೇಮಕ ಮಾಡಿದೆ. ಸಮಾಪನಾಧಿಕಾರಿಯವರು ದಿನಾಂಕ:05.12.2001ರಂದು ಪ್ರಭಾರ ವಹಿಸಿಕೊಂಡು ಚರಾಸ್ತಿಯನ್ನು ವಿಲೇ ಮಾಡಿ ಸಂಘದ ಆಸ್ತಿ ಜವಾಬ್ದಾರಿಯನ್ನು ಶೂನ್ಯಗೊಳಿಸಿರುತ್ತಾರೆ. ಈ ಸಂಘದಲ್ಲಿ ಸರ್ಕಾರದ ಪಾಲು ಏನೂ ಇರುವುದಿಲ್ಲವೆಂದು ಮತ್ತು ಸ್ಥಿರಾಸ್ತಿ ಇಲ್ಲವೆಂದು ವರದಿ ಮಾಡಿ ದಿನಾಂಕ: 25.06.2004ರಂದು ಅಂತಿಮ ಸಭೆ ನಡೆಸಿರುತ್ತಾರೆ. ಈ ಹಿನ್ನೆಲೆಯಲ್ಲಿ ಶಿವಮೊಗ್ಗ ಉಪ-ವಿಭಾಗದ ಸಹಾಯಕ ನಿಬಂಧಕರು, ಉಲ್ಲೇಖ (2)ರ ಪತ್ರದಲ್ಲಿ ನೊಂದಣಿ ರದ್ದತಿಗಾಗಿ ಶಿಫಾರಸ್ಸು ಮಾಡಿರುತ್ತಾರೆ.

ಸಾಗರ ಉಪ-ವಿಭಾಗದ ಸಹಕಾರ ಸಂಘಗಳ ಸಹಾಯಕ ನಿಬಂಧಕರ ಉಲ್ಲೇಖ (2)ರಲ್ಲಿಯ ಶಿಫಾರಸ್ಸು ಅನ್ವಯ ಮತ್ತು ಸರ್ಕಾರದ ವಿನಿಯೋಗಗಳು ಇಲ್ಲದ ಪ್ರಯುಕ್ತ ಹಾಗೂ ಆಸ್ತಿ ಜವಾಬ್ದಾರಿ ಶೂನ್ಯವಾಗಿರುವ ಕಾರಣ, ಈ ಸಂಘದ ಅಸ್ತಿತ್ವದಿಂದ ಸದಸ್ಯರಿಗಾಗಲೀ, ಸಾರ್ವಜನಿಕರಿಗಾಗಲೀ ಪ್ರಯೋಜನವಿಲ್ಲವೆಂದು ಮನಗಂಡು, ಸಂಘದ ನೊಂದಣಿಯನ್ನು ರದ್ದುಗೊಳಿಸುವುದು ಸೂಕ್ತವೆಂದು ಪರಿಗಣಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 75ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್ಎಂ:2000, ದಿನಾಂಕ:21.11.2001ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಕೆ. ಈಶ್ವರಸ್ವಾಮಿ, ಸಹಕಾರ ಸಂಘಗಳ ಉಪ-ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಆದ ನಾನು ಹಾಲು ಉತ್ಪಾದಕರ ಸಹಕಾರ ಸಂಘ ನಿ., ಬುಕ್ಲಾಪುರ, ತೀರ್ಥಹಳ್ಳಿ ತಾಲ್ಲೂಕು ಇದರ ನೋಂದಣಿ ಸಂಖ್ಯೆ:26280/99-2000, ದಿನಾಂಕ:11.06.99ನ್ನು ತಕ್ಷಣ ಜಾರಿಗೆ ಬರುವಂತೆ ರದ್ದುಗೊಳಿಸಿ, ಆದೇಶಿಸಿರುತ್ತೇನೆ.

ಈ ಆದೇಶದ ದಿನಾಂಕದಿಂದ ಈ ಸಂಘವು ಸಂಪೂರ್ಣವಾಗಿ ತನ್ನ ಅಸ್ತಿತ್ವವನ್ನು ಕಳೆದುಕೊಂಡಿದೆ ಎಂದು ಪರಿಗಣಿಸತಕ್ಕದ್ದು. ಈ ಸಂಘದ ದಾಖಲಾತಿಗಳನ್ನು 3 ವರ್ಷಗಳ ಅವಧಿಗೆ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ರವರ ಕಛೇರಿಯಲ್ಲಿ ಕಾಯ್ದಿರಿಸತಕ್ಕದ್ದು.

ಈ ಆದೇಶವನ್ನು ಈ ದಿನ ದಿನಾಂಕ:30ನೇ ಜೂನ್ 2004 ರಂದು ನನ್ನ ಸ್ವಸಹಿ ಮತ್ತು ಕಛೇರಿ ಮುದ್ರೆಯೊಂದಿಗೆ ಹೊರಡಿಸಿದೆ.

ಸಹಕಾರ ಸಂಘಗಳ ಉಪ-ನಿಬಂಧಕರು,
ಶಿವಮೊಗ್ಗ.

ಪಿ.ಆರ್. 1070

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ರವರ ಕಾರ್ಯಾಲಯ**

**ಸಂಖ್ಯೆ: ಡಿಆರ್ಎಸ್/ ಸಮಾಪನೆ/ಡಿಎಲ್ಎಸ್/ 15 /2004-05, 553, ದಿನಾಂಕ:30ನೇ ಜೂನ್, 2004**

**ವಿಷಯ :** ಸಮಾಪನಾ ಆದೇಶಿತ ಸಣ್ಣ ನೀರಾವರಿ ನೀರು ಬಳಕೆದಾರರ ಸ.ಸಂ.ನಿ., ದಾನವಾಡಿ, ಭದ್ರಾವತಿ ತಾಲ್ಲೂಕು ಇದರ ನೊಂದಣಿ ರದ್ದತಿ ಬಗ್ಗೆ.

**ಉಲ್ಲೇಖ :**
1. ಈ ಕಛೇರಿಯ ಆದೇಶ ಸಂಖ್ಯೆ:ಡಿಆರ್ಎಸ್/ಸಮಾಪನೆ/ ಡಿಎಲ್ಎಸ್/ 15/ 2003-04, ದಿನಾಂಕ:19.05.2004.
2. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಇವರ ಪತ್ರ ನಂ.ಎಆರ್-24/ ನೊಂದಣಿ/ ರದ್ದತಿ/ 445/ 2004-05 ದಿನಾಂಕ: 28.06.2004.

ಸಣ್ಣ ನೀರಾವರಿ ನೀರು ಬಳಕೆದಾರರ ಸಹಕಾರ ಸಂಘ ನಿ., ದಾನವಾಡಿ, ಭದ್ರಾವತಿ ತಾಲ್ಲೂಕು ಈ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ರವರ ಕಾರ್ಯಾಲಯದ ನೊಂದಣಿ ನಂ.30005/2001-2002/ ದಿನಾಂಕ: 10.07.2001ರಲ್ಲಿ ನೋಂದಣಿಯಾಗಿದ್ದು, ಈ ಸಂಘದ ಕಾರ್ಯವ್ಯಾಪ್ತಿಯು ತಾಲ್ಲೂಕು ಮಟ್ಟಕ್ಕಿಂತ ಕಡಿಮೆಯಾಗಿರುತ್ತದೆ. ಈ ಸಂಘವು ತನ್ನ ಕಾರ್ಯಾಚರಣೆಯನ್ನು ಸ್ಥಗಿತಗೊಳಿಸಿದ್ದರಿಂದ ಉಲ್ಲೇಖ (1)ರ ಈ ಕಛೇರಿಯ ಆದೇಶದಲ್ಲಿ ಸಮಾಪನೆಗೆ ಆದೇಶಿಸಿದ್ದು, ಸಹಕಾರ ಅಭಿವೃದ್ಧಿ ಅಧಿಕಾರಿ, ಭದ್ರಾವತಿ ಇವರನ್ನು ಸಮಾಪನಾಧಿಕಾರಿಯಾಗಿ ನೇಮಕ ಮಾಡಿದೆ. ಸಮಾಪನಾಧಿಕಾರಿಯವರು ದಿನಾಂಕ: 18.06.2004ರಂದು ಪ್ರಭಾರ ವಹಿಸಿಕೊಂಡು ಚರಾಸ್ತಿಯನ್ನು ವಿಲೇ ಮಾಡಿ ಸಂಘದ ಆಸ್ತಿ ಜವಾಬ್ದಾರಿಯನ್ನು ಶೂನ್ಯಗೊಳಿಸಿರುತ್ತಾರೆ. ಈ ಸಂಘದಲ್ಲಿ ಸರ್ಕಾರದ ಪಾಲು ಏನೂ ಇರುವುದಿಲ್ಲವೆಂದು ಮತ್ತು ಸ್ಥಿರಾಸ್ತಿ ಇಲ್ಲವೆಂದು ವರದಿ ಮಾಡಿ ದಿನಾಂಕ:25.06.2004ರಂದು ಅಂತಿಮ ಸಭೆ ನಡೆಸಿರುತ್ತಾರೆ. ಈ ಹಿನ್ನೆಲೆಯಲ್ಲಿ ಶಿವಮೊಗ್ಗ ಉಪ-ವಿಭಾಗದ ಸಹಾಯಕ ನಿಬಂಧಕರು, ಉಲ್ಲೇಖ (2)ರ ಪತ್ರದಲ್ಲಿ ನೋಂದಣಿ ರದ್ದತಿಗಾಗಿ ಶಿಫಾರಸ್ಸು ಮಾಡಿರುತ್ತಾರೆ.

ಶಿವಮೊಗ್ಗ ಉಪ-ವಿಭಾಗದ ಸಹಕಾರ ಸಂಘಗಳ ಸಹಾಯಕ ನಿಬಂಧಕರ ಉಲ್ಲೇಖ (2)ರಲ್ಲಿಯ ಶಿಫಾರಸ್ಸು ಅನ್ವಯ ಮತ್ತು ಸರ್ಕಾರದ ವಿನಿಯೋಗಗಳು ಇಲ್ಲದ ಪ್ರಯುಕ್ತ ಹಾಗೂ ಆಸ್ತಿ ಜವಾಬ್ದಾರಿ ಶೂನ್ಯವಾಗಿರುವ ಕಾರಣ, ಈ ಸಂಘದ ಅಸ್ತಿತ್ವದಿಂದ ಸದಸ್ಯರಿಗಾಗಲೀ, ಸಾರ್ವಜನಿಕರಿಗಾಗಲೀ ಪ್ರಯೋಜನವಿಲ್ಲವೆಂದು ಮನಗಂಡು, ಸಂಘದ ನೊಂದಣಿಯನ್ನು ರದ್ದುಗೊಳಿಸುವುದು ಸೂಕ್ತವೆಂದು ಪರಿಗಣಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 75ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್ಎಂ:2000, ದಿನಾಂಕ:21.11.2001ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ ಕೆ. ಈಶ್ವರಸ್ವಾಮಿ, ಸಹಕಾರ ಸಂಘಗಳ ಉಪ-ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಆದ ನಾನು ಸಣ್ಣ ನೀರಾವರಿ ನೀರು ಬಳಕೆದಾರರ ಸಹಕಾರ ಸಂಘ ನಿ., ದಾನವಾಡಿ, ಭದ್ರಾವತಿ ತಾಲ್ಲೂಕು ಇದರ ನೋಂದಣಿ ಸಂಖ್ಯೆ:30005/2001-2002, ದಿನಾಂಕ:10.07.2001ನ್ನು ತಕ್ಷಣ ಜಾರಿಗೆ ಬರುವಂತೆ ರದ್ದುಗೊಳಿಸಿ, ಆದೇಶಿಸಿರುತ್ತೇನೆ.

ಈ ಆದೇಶದ ದಿನಾಂಕದಿಂದ ಈ ಸಂಘವು ಸಂಪೂರ್ಣವಾಗಿ ತನ್ನ ಅಸ್ತಿತ್ವವನ್ನು ಕಳೆದುಕೊಂಡಿದೆ ಎಂದು ಪರಿಗಣಿಸತಕ್ಕದ್ದು. ಈ ಸಂಘದ ದಾಖಲಾತಿಗಳನ್ನು 3 ವರ್ಷಗಳ ಅವಧಿಗೆ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ರವರ ಕಛೇರಿಯಲ್ಲಿ ಕಾಯ್ದಿರಿಸತಕ್ಕದ್ದು.

ಈ ಆದೇಶವನ್ನು ಈ ದಿನ ದಿನಾಂಕ:30ನೇ ಜೂನ್ 2004 ರಂದು ನನ್ನ ಸ್ವಸಹಿ ಮತ್ತು ಕಛೇರಿ ಮುದ್ರೆಯೊಂದಿಗೆ ಹೊರಡಿಸಿದೆ.

ಸಹಕಾರ ಸಂಘಗಳ ಉಪ-ನಿಬಂಧಕರು,
ಶಿವಮೊಗ್ಗ.

ಪಿ.ಆರ್. 1071

## ಬೆಂಗಳೂರು ನಗರ ಸಿವಿಲ್ ಮತ್ತು ಸತ್ರ ನ್ಯಾಯಾಲಯ ಕಛೇರಿ, ಬೆಂಗಳೂರು

### ಪ್ರಕಟಣೆ

**ಎಡಿಎಂ.1(ಬಿ) 149:2004, ದಿನಾಂಕ:17ನೇ ಜುಲೈ, 2004**

ಲಘು ವ್ಯಾಜ್ಯಗಳ ನ್ಯಾಯಾಲಯ ಬೆಂಗಳೂರು ಇಲ್ಲಿ ಜವಾನರಾಗಿ ಕರ್ತವ್ಯ ನಿರ್ವಹಿಸುತ್ತಿರುವ ಶ್ರೀ ಕೆ. ಪ್ರಕಾಶ್ ಸನ್ ಆಫ್ ಕಾಳಾಚಾರಿ, ಗೊರಗನಹಳ್ಳಿ, ಕಸಬಾ ಹೋಬಳಿ, ತಿಪಟೂರು ತಾಲ್ಲೂಕು, ತುಮಕೂರು ಜಿಲ್ಲೆ, ನೀವು ದಿನಾಂಕ:28.02.94ರಿಂದ ಅನಧಿಕೃತ ಗೈರುಹಾಜರಾಗಿದ್ದ ಬಗ್ಗೆ ಇಲಾಖಾ ವಿಚಾರಣೆ ಸಂಖ್ಯೆ: 17/98 ಯನ್ನು ಜರುಗಿಸಿದ್ದು ನಂತರ ಏಕಪಕ್ಷೀಯ ವಿಚಾರಣೆ ನಡೆಸಿ ದಿನಾಂಕ:17.04.2004ರ ಆದೇಶದ ಪ್ರಕಾರ ನಿಮ್ಮನ್ನು ಕೆ.ಸಿ.ಎಸ್.ಆರ್. (ಸಿ.ಸಿ.ಎ) ನಿಯಮಾವಳಿಗಳು 1957ರ 8(vii) ನಿಯಮದ ರೀತ್ಯಾ ಕೆಲಸದಿಂದ ತೆಗೆದುಹಾಕಿದ್ದು, ಸದರೀ ಆದೇಶವನ್ನು (ಆದೇಶ ಸಂಖ್ಯೆ: ಎಡಿಎಂ 1(ಬಿ) 89/04, ದಿನಾಂಕ:19.04.04) ನಿಮ್ಮ ವಿಳಾಸಕ್ಕೆ ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ತಿಪಟೂರು ಮುಖಾಂತರ ಕಳುಹಿಸಿದ್ದು ನೀವು "ಸದರೀ ವಿಳಾಸದಲ್ಲಿ ವಾಸ ಇಲ್ಲ" ಎಂಬ ಷರಾದೊಂದಿಗೆ ವಾಪಸ್ ಬಂದಿರುತ್ತದೆ. ಆದ್ದರಿಂದ ಈ ಪ್ರಕಟಣೆಯನ್ನು ಕೆ.ಸಿ.ಎಸ್. (ಸಿ.ಸಿ.ಎ) ನಿಯಮಾವಳಿಗಳ ರೀತ್ಯಾ ರಾಜ್ಯಪತ್ರದಲ್ಲಿ ಹಾಗೂ ನಿಯತಕಾಲಿಕದಲ್ಲಿ ಈ ಮೂಲಕ ಪ್ರಕಟಿಸಿದೆ. ಈ ಪ್ರಕಟಣೆ ಪ್ರಕಟವಾದ 15 ದಿನಗಳೊಳಗಾಗಿ ಅಂತಿಮ ಆದೇಶದ ಪ್ರತಿಯನ್ನು ಈ ಕಛೇರಿಯಿಂದ ನೀವು ಪಡೆಯಬಹುದಾಗಿರುತ್ತದೆ ಎಂದು ಈ ಮೂಲಕ ಸೂಚಿಸಿದೆ.

**ಅರಳಿ ನಾಗರಾಜ್**
ಪ್ರಧಾನ ನಗರ ಸಿವಿಲ್ ನ್ಯಾಯಾಧೀಶರು, ಬೆಂಗಳೂರು.

ಪಿ.ಆರ್. 1072

## ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರುರವರ ನ್ಯಾಯಾಲಯದಲ್ಲಿ

**ನಂ.ಎಸ್‌ಡಿಕೆ:152:ಡಿಟಿಸಿಆರ್: 2003-04, ದಿನಾಂಕ: 14ನೇ ಜುಲೈ, 2004**

**ಉಪಸ್ಥಿತರು:** ಗೋವಿಂದಪ್ಪ, ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ದ.ಕ. ಜಿಲ್ಲೆ, ಮಂಗಳೂರು.

**ಫಿರ್ಯಾದುದಾರರು:**

1. ಅಬಕಾರಿ ನಿರೀಕ್ಷಕರು,
ನಂ.2, ಅಬಕಾರಿ ಗುಪ್ತವಾರ್ತಾದಳ,
ಮಂಗಳೂರು ವಿಭಾಗ, ಮಂಗಳೂರು.

**ವಿರುದ್ಧ**

**ಆಪಾದಿತರು**

1. ಶ್ರೀ ಜೋಜೊ ಅಂಟ್ಯನಿ ಟಿ.
ಬಿನ್ ಟಿ.ವಿ. ಅಂಟ್ಯನಿ, ತಿರಿಪೂರಿಯರ್ ನಾಟಿಕ್,
ತ್ರಿಚೂರು ಜಿಲ್ಲೆ, ಕೇರಳ ರಾಜ್ಯ.
(ಕಟ್ಟಡ ಬಾಡಿಗೆದಾರರು ಪರಾರಿಯಾಗಿರುತ್ತಾರೆ)
2. ಶ್ರೀಮತಿ ಶಂಶುನ್ನಿಸಾ, ಕೋಂ ದಿ. ಜುಬೇರ್ ಅಹ್ಮದ್,
2ನೇ ಕ್ರಾಸ್, ವಾಸ್ ಲೇನ್, ಮಂಗಳೂರು-3.

**ಪ್ರಕರಣದ ಮುಖ್ಯಾಂಶಗಳು**

ದಿನಾಂಕ: 14.01.2004ರಂದು ಮಧ್ಯಾಹ್ನ 12.00 ಗಂಟೆಗೆ ಅಬಕಾರಿ ನಿರೀಕ್ಷಕರು, ಗುಪ್ತವಾರ್ತಾದಳ, ಮಂಗಳೂರು ಇವರು ಗುಪ್ತವಾರ್ತಾದಳದ ಹಾಗೂ ಮಂಗಳೂರು ಉಪ ವಿಭಾಗದ ಉಪ ಅಧೀಕ್ಷಕರು ಮತ್ತು ಸಿಬ್ಬಂದಿಯೊಂದಿಗೆ ಖಚಿತ ವರ್ತಮಾನದೊಂದಿಗೆ ಮಂಗಳೂರು ನಗರ ಫಳ್ನೀರಿನ 16ನೇ ವಾರ್ಡ್ ವಾಸ್‌ಲೇನ್‌ನ 2ನೇ ಅಡ್ಡರಸ್ತೆಯಲ್ಲಿರುವ ಮುಶಾರಿಕಾನ-ಸುಜಾನ್ನ ವಿಲ್ಲಾ ಮನೆಯ ಮುಂಭಾಗದ ಕಟ್ಟಡ ಸಂಖ್ಯೆ:16-05-347ರಲ್ಲಿ ಅಕ್ರಮವಾಗಿ ಯಾವುದೇ ಪರವಾನಿಗೆ ಯಾ ರಹದಾರಿಯಿಲ್ಲದೆ ಅಕ್ರಮ 175.000 ಲೀಟರು ಮದ್ಯಸಾರ, 227.000 ಲೀಟರ್ ಬ್ಲೆಂಡೆಡ್ ಮದ್ಯ, ಖಾಲಿ ಕ್ಯಾನ್‌ಗಳು, ಎಸೆನ್ಸ್ ಖಾಲಿ ಬಾಟ್ಲಿಗಳು, ಬಾಟ್ಲಿ ಕ್ಯಾಪಿಂಗ್ ಯಂತ್ರವನ್ನು ಹಾಗೂ 145 ಪೆಟ್ಟಿಗೆಗಳಲ್ಲಿ 1304.000 ಲೀಟರ್ ವಿವಿಧ ಮಾದರಿಯ ನಕಲಿ ಮದ್ಯ ಹಾಗೂ 12 ಪೆಟ್ಟಿಗೆಗಳಲ್ಲಿ ವಿವಿಧ ಮಾದರಿಯ ನಕಲಿ ಮದ್ಯವನ್ನು ತುಂಬಿಸಿ ಸಾಗಣೆ ಮಾಡಲು ಉಪಯೋಗಿಸುತ್ತಿದ್ದ ಮಾರುತಿ ವ್ಯಾನು ಸಂಖ್ಯೆ: ಕೆಎ-19 ಎಂ-3505 ನ್ನು ಪತ್ತೆ ಹಚ್ಚಿ ಇದು ಕರ್ನಾಟಕ ಅಬಕಾರಿ ಕಾಯ್ದೆ ಕಲಂ 10,11,12,13,14 ಹಾಗೂ 15ರ ರೀತ್ಯಾ ಉಲ್ಲಂಘನೆಯಾಗಿದ್ದು, ಹಾಗೂ ಕಲಂ 32, 34 ಮತ್ತು

38(ಎ)ರ ರೀತ್ಯಾ ಶಿಕ್ಷಾರ್ಹವಾಗಿರುವುದರಿಂದ ಮೊಕದ್ದಮೆ ಸಂಖ್ಯೆ: 14/2003-04 ದಿನಾಂಕ: 14.01.2004ರ ಮೂಲಕ ಮೊಕದ್ದಮೆಯನ್ನು ದಾಖಲು ಮಾಡಿರುತ್ತಾರೆ. ಹಾಗೂ ಮೊಕದ್ದಮೆಯಲ್ಲಿ ಈ ಕೆಳಕಂಡ ವಸ್ತುಗಳನ್ನು ಜಪ್ತು ಪಡಿಸಿರುತ್ತಾರೆ.

1. 35.000 ಲೀಟರ್ ಗಾತ್ರದ 5 ಬಿಳಿ ಬಣ್ಣದ ಪ್ಲಾಸ್ಟಿಕ್ ಕ್ಯಾನ್‌ಗಳಲ್ಲಿ ಸುಮಾರು 175.000 ಲೀಟರ್ ಮದ್ಯಸಾರ.
2. 35.000 ಲೀಟರ್ ಗಾತ್ರದ 6 ಬಿಳಿ ಬಣ್ಣದ ಪ್ಲಾಸ್ಟಿಕ್ ಕ್ಯಾನ್‌ಗಳಲ್ಲಿ ಸುಮಾರು 210.000 ಲೀಟರ್ ಬ್ಲೆಂಡೆಡ್ ಡೈಲುಟೆಡ್ ಮದ್ಯಸಾರ.
3. 10.000 ಲೀಟರ್ ಗಾತ್ರದ 3 ಬಿಳಿ ಬಣ್ಣದ ಪ್ಲಾಸ್ಟಿಕ್ ಕ್ಯಾನ್‌ಗಳಲ್ಲಿ ಸುಮಾರು 10.000 ಲೀಟರ್ ಒಂದರಲ್ಲಿ 5 ಲೀಟರ್ ಹಾಗೂ ಇನ್ನೊಂದರಲ್ಲಿ 2 ಲೀಟರ್ ಒಟ್ಟಾಗಿ 3 ಕ್ಯಾನ್‌ಗಳಲ್ಲಿ 17.000 ಲೀಟರ್ ಬ್ಲೆಂಡೆಡ್ ಡೈಲುಟೆಡ್ ಮದ್ಯಸಾರ.
4. 35.000 ಲೀಟರ್ ಗಾತ್ರದ 39 ಖಾಲಿ ಪ್ಲಾಸ್ಟಿಕ್ ಕ್ಯಾನ್‌ಗಳು.
5. 100.000 ಲೀಟರ್ ಗಾತ್ರದ ಡ್ರಂನಲ್ಲಿ ಕೆರಾಮೆಲ್ ಮಿಶ್ರಿತ 50.000 ಲೀಟರ್ ಎಸೆನ್ಸ್.
6. 25.000 ಲೀಟರ್ ಗಾತ್ರದ 2 ಡ್ರಂಗಳಲ್ಲಿ 50.000 ಲೀಟರ್ ಅಂಟು.
7. 40 ಪ್ಲಾಸ್ಟಿಕ್ ಟ್ರೇಗಳು.
8. 200.000 ಲೀಟರ್ ಗಾತ್ರದ ಮುಚ್ಚಳ ಇರುವ ಸ್ಟೀಲ್ ಡ್ರಂಗಳು-5
9. 100.000 ಲೀಟರ್ ಗಾತ್ರದ ಮುಚ್ಚಳ ಇರುವ ಸ್ಟೀಲ್ ಡ್ರಂಗಳು-1
10. ಒಂದು ಮರದ ಟೇಬಲ್.
11. 10 ಮೀಟರ್ 1/2 ಇಂಚಿನ ಪ್ಲಾಸ್ಟಿಕ್ ಹೋಸ್ ಪೈಪ್.
12. 750 ಎಂ.ಎಲ್.ನ 5320 ಖಾಲಿ ಪ್ಲಾಸ್ಟಿಕ್ ಸೀಸೆಗಳು
13. 2 ಪ್ಲಾಸ್ಟಿಕ್ ಗೋಣಿ ಚೀಲದಲ್ಲಿ ಸುಮಾರು 2000 ಮುಚ್ಚಳಗಳು.
14. 2 ಗೋಣಿ ಚೀಲಗಳಲ್ಲಿ 180 ಎಂ.ಎಲ್.ನ ಖಾಲಿ ಸೀಸೆಗಳು
15. 2 ಗೋಣಿ ಚೀಲಗಳಲ್ಲಿ 375 ಎಂ.ಎಲ್.ನ ಖಾಲಿ ಸೀಸೆಗಳು
16. 500 ಖಾಲಿ ರಟ್ಟಿನ ಪೆಟ್ಟಿಗೆಗಳು.
17. 7200 ವಿವಿಧ ಬ್ರಾಂಡ್‌ಗಳ ಡಿಸ್ಟಿಲರಿಯ ಮದ್ಯದ ಲೇಬಲ್‌ಗಳು
18. ಮಾನವ ಚಾಲಿತ ಕ್ಯಾಪಿಂಗ್ ಮೆಷೀನ್-1
19. **ಕಟ್ಟಡದ ಒಳಗೆ ದೊರೆತ ನಕಲಿ ಮದ್ಯದ ವಿವರ: (ಒಟ್ಟು 1304.640 ಲೀಟರ್)**
    1. ಮೈಸೂರು ಲ್ಯಾನ್ಸರ್ ವಿಸ್ಕಿಯ 375 ಎಂ.ಎಲ್.ನ 15 ಪೆಟ್ಟಿಗೆ-135.000 ಲೀಟರ್
    2. ಒರಿಜಿನಲ್ ಚಾಯ್ಸ್ ವಿಸ್ಕಿಯ 750 ಎಂ.ಎಲ್.ನ 50 ಪೆಟ್ಟಿಗೆ-450.000 ಲೀಟರ್
    3. ಒರಿಜಿನಲ್ ಚಾಯ್ಸ್ ವಿಸ್ಕಿಯ 375 ಎಂ.ಎಲ್.ನ 4 ಪೆಟ್ಟಿಗೆ-36.000 ಲೀಟರ್
    4. ಆನಂದಾಸ್ ಮಾಸ್ಟರ್ ನಂ.1 ಬ್ರಾಂಡಿ 750 ಎಂ.ಎಲ್.ನ 18 ಪೆಟ್ಟಿಗೆ-162.000 ಲೀಟರ್.
    5. ಆನಂದಾಸ್ ಮಾಸ್ಟರ್ ನಂ.1 ವಿಸ್ಕಿ 750 ಎಂ.ಎಲ್.ನ 23 ಪೆಟ್ಟಿಗೆ-207.000 ಲೀಟರ್.
    6. ಆನಂದಾಸ್ ಮಾಸ್ಟರ್ ನಂ.1 ರಮ್ 750 ಎಂ.ಎಲ್.ನ 34 ಪೆಟ್ಟಿಗೆ-306.000 ಲೀಟರ್.
    7. ಓಲ್ಡ್ ಮಾಂಕ್ ರಮ್ 180 ಎಂ.ಎಲ್.ನ 1 ಪೆಟ್ಟಿಗೆ-8.640 ಲೀಟರ್.
20. 108.000 ಲೀಟರ್ ನಕಲಿ ಮದ್ಯವನ್ನು ಹೊಂದಿ ಸಾಗಾಣಿಕೆಗೆ ಬಳಸುತ್ತಿದ್ದ ಮಾರುತಿ ಓಮಿನಿ ವ್ಯಾನ್ ಸಂಖ್ಯೆ: ಕೆಎ-19 ಎಂ-3505.

**ಕಾರಿನಲ್ಲಿದ್ದ 108.000 ಲೀಟರ್ ನಕಲಿ ಮದ್ಯದ ವಿವರ:**

1. ಮೈಸೂರು ಲ್ಯಾನ್ಸರ್ ವಿಸ್ಕಿಯ 375 ಎಂ.ಎಲ್.ನ 48 ಪೆಟ್ಟಿಗೆ-18.000 ಲೀಟರ್
2. ಒರಿಜಿನಲ್ ಚಾಯ್ಸ್ ವಿಸ್ಕಿಯ 750 ಎಂ.ಎಲ್.ನ 60 ಪೆಟ್ಟಿಗೆ-45.000 ಲೀಟರ್
3. ಒರಿಜಿನಲ್ ಚಾಯ್ಸ್ ವಿಸ್ಕಿಯ 375 ಎಂ.ಎಲ್.ನ 24 ಪೆಟ್ಟಿಗೆ-9.000 ಲೀಟರ್
4. ಆನಂದಾಸ್ ಮಾಸ್ಟರ್ ನಂ.1 ಬ್ರಾಂಡಿ 750 ಎಂ.ಎಲ್.ನ 12 ಪೆಟ್ಟಿಗೆ-9.000 ಲೀಟರ್.
5. ಆನಂದಾಸ್ ಮಾಸ್ಟರ್ ನಂ.1 ವಿಸ್ಕಿ 750 ಎಂ.ಎಲ್.ನ 12 ಪೆಟ್ಟಿಗೆ-9.000 ಲೀಟರ್.
6. ಆನಂದಾಸ್ ಮಾಸ್ಟರ್ ನಂ.1 ರಮ್ 750 ಎಂ.ಎಲ್.ನ 24 ಪೆಟ್ಟಿಗೆ-18.000 ಲೀಟರ್.

ಈ ಮೇಲಿನ ಜಪ್ತು ಪಡಿಸಲಾಗಿರುವ ಮದ್ಯಸಾರ ತುಂಬಿದ 5 ಕ್ಯಾನುಗಳಿಂದ ತಲಾ 1 ರಂತೆ 750 ಮಿಲಿಯ 5 ಬಾಟ್ಲಿಗಳಲ್ಲಿ ಮದ್ಯಸಾರವನ್ನು, ಬ್ಲೆಂಡೆಡ್ ಮದ್ಯದಿಂದ 180 ಮಿಲಿಯ 6 ಬಾಟ್ಲಿಗಳಲ್ಲಿ ಬ್ಲೆಂಡೆಡ್ ಮದ್ಯವನ್ನು, ಕೆರಾಮೆಲ್ ಮಿಶ್ರಿತ ಎಸೆನ್ಸ್‌ನಿಂದ 750 ಮಿಲಿಯ 1 ಬಾಟ್ಲಿಯಲ್ಲಿ ಎಸೆನ್ಸ್‌ನ್ನು ಹಾಗೂ ಮನೆಯೊಳಗೆ ಹಾಗೂ ಕಾರಿನಲ್ಲಿದ್ದ ರಟ್ಟಿನ ಪೆಟ್ಟಿಗೆಗಳಿಂದ ತರಹೆವಾರು ಹಾಗೂ ಗಾತ್ರವಾರಿನಂತೆ 750 ಮಿಲಿಯ 4 ಬಾಟ್ಲಿಗಳು, 375 ಮಿಲಿಯ 2 ಬಾಟ್ಲಿಗಳು ಹಾಗೂ 180 ಮಿಲಿಯ 1 ಬಾಟ್ಲಿಯನ್ನು ಮಾದರಿಯಾಗಿ ತೆಗೆದು ಎಲ್ಲಾ ಬಾಟ್ಲಿಗಳಿಗೂ ಬಟ್ಟೆ ದಾರದಿಂದ ಕಟ್ಟಿ ಇಲಾಖೆಯ ಸೀಲ್‌ನಿಂದ ಸೀಲ್ ಮಾಡಿ ಎಲ್ಲಾ ಮಾದರಿ ಶೀಷೆಗಳಿಗೆ ಗುರುತಿನ ಚೀಟಿಗಳನ್ನು ಅಂಟಿಸಿರುತ್ತಾರೆ. ಈ ಮೇಲಿನ ಅಬಕಾರಿ ವಸ್ತುಗಳನ್ನು, ನಕಲಿ ಮದ್ಯ ಹಾಗೂ ಮದ್ಯ ತಯಾರಿಕಾ ಯಂತ್ರವನ್ನು ಹೊಂದಿ ಮದ್ಯ ತಯಾರಿಕೆಯಲ್ಲಿ ತೊಡಗಿರುವುದು ಅಬಕಾರಿ ಕಾನೂನಿಗೆ ವಿರುದ್ಧವಾಗಿದ್ದು, ದೊರೆತ ಎಲ್ಲಾ ವಸ್ತುಗಳನ್ನು ಕಾರಿನೊಂದಿಗೆ ಸ್ಥಳ ಮಹಜರು ನಡೆಸಿ ಸರ್ಕಾರಕ್ಕೆ ವಶಪಡಿಸಿಕೊಳ್ಳಲಾಗಿರುತ್ತದೆ. ಆರೋಪಿಯು ತಲೆಮರೆಸಿಕೊಂಡಿದ್ದು ಆರೋಪಿಯನ್ನು ದಸ್ತಗಿರಿ ಮಾಡಲು

ಸಾಧ್ಯವಾಗಿರುವುದಿಲ್ಲ. ಕಟ್ಟಡವನ್ನು ತಪಾಸಣೆ ಮಾಡುವ ಸಮಯದಲ್ಲಿ ಅಡುಗೆ ಕೋಣೆಯ ಮರದ ಕಪಾಟಿನಲ್ಲಿ ಮನೆಯ ಬಾಡಿಗೆ ಕರಾರು ಪತ್ರದ ಜೆರಾಕ್ಸ್ ಪ್ರತಿಯು ದೊರೆತಿದ್ದು, ಅದರ ಪ್ರಕಾರ ಮನೆಯ ಮಾಲಿಕರು ಅಂಶುನುನ್ನಿಸಾ, ಕೋಂ ದಿ. ಜುಬೇರ ಅಹಮ್ಮದ್ ಆಗಿದ್ದು ಈ ಮಾಲಿಕರು ಸದರಿ ಮನೆಯನ್ನು ಜೋಜೊ ಆಂಟೋನಿ ಟಿ. ಬಿನ್ ಟಿ.ವಿ. ಆಂಟೋನಿ, ತಿರುಪೂರಿಯರ್, ನಾಟಿಕ್, ತ್ರಿಶೂರ್, ಕೇರಳ ರಾಜ್ಯ ಇವರಿಗೆ ಬಾಡಿಗೆಗೆ ನೀಡಿದ್ದು ದೃಢಪಟ್ಟಿರುವುದರಿಂದ ಈ ಮೇಲಿನ ಆಸಾಮಿಗಳನ್ನು ಆರೋಪಿಗಳನ್ನಾಗಿ ಮಾಡಿ ಅವರ ವಿರುದ್ಧ ಮೊಕದ್ದಮೆಯನ್ನು ದಾಖಲು ಮಾಡಿ ಪ್ರಥಮ ಮಾಹಿತಿ ವರದಿ, ಮಹಜರು, ಸರ್ಚ್ ಲಿಸ್ಟ್ ಹಾಗೂ ವಾರೆಂಟನ್ನು ಪಡೆಯದೆ, ಸರ್ಚ್ ಮಾಡಿದ್ದಕ್ಕಾಗಿ ಕಾರಣವನ್ನು ಮಾನ್ಯ ನ್ಯಾಯಾಲಯಕ್ಕೂ ಹಾಗೂ ಸದರಿ ದಾಖಲೆಗಳ ಪ್ರತಿಗಳನ್ನು ಅಬಕಾರಿ ಕಾಯ್ದೆ ಕಲಂ 43(ಎ)ರ ಅಡಿಯಲ್ಲಿನ ವರದಿಯೊಂದಿಗೆ ಪ್ರಾಧಿಕಾರಕ್ಕೂ ಸಲ್ಲಿಸಿ ಜಪ್ತು ಪಡಿಸಲಾಗಿರುವ ವಸ್ತುಗಳನ್ನು ತನ್ನ ಸುಪರ್ದು ಇಟ್ಟುಕೊಳ್ಳಲು ಅನುಮತಿಯನ್ನು ಪಡೆದಿರುತ್ತಾರೆ.

ನಂತರ ಪ್ರಕರಣದಲ್ಲಿ ಜಪ್ತು ಪಡಿಸಿರುವ ಮದ್ಯಸಾರ, ನಕಲಿ ಮದ್ಯದ ಮಾದರಿಗಳನ್ನು ರಾಸಾಯನಿಕ ವಿಶ್ಲೇಷಣೆಗೆ ಒಳಪಡಿಸಿದ್ದು ಮದ್ಯಸಾರದ ತೀಕ್ಷ್ಣತೆ 66 ಡಿಗ್ರಿ ಒ.ಪಿ. ಇದ್ದು ಮಾನವ ಸೇವನೆಗೆ ಯೋಗ್ಯವಾಗಿರುವುದಾಗಿ, ಉಳಿದ ಮದ್ಯದಲ್ಲಿ ಮದ್ಯದ ಅಂಶವು ಶೇ. 37 ರಿಂದ 41ರ ವರೆಗೆ ಇದ್ದು ತೀಕ್ಷ್ಣತೆ ಕಡಿಮೆಯಿರುವುದಾಗಿ ಹಾಗೂ ಸದರಿ ಮದ್ಯವು ಮಾನವ ಸೇವನೆಗೆ ಯೋಗ್ಯವಾಗಿರುವುದಿಲ್ಲ ಎಂದು ತಜ್ಞರು ಅಭಿಪ್ರಾಯಪಟ್ಟು ವರದಿ ನೀಡಿರುತ್ತಾರೆ. ಮದ್ಯಸಾರವು 66 ಡಿಗ್ರಿ ಒ.ಪಿ. ತೀಕ್ಷ್ಣತೆ ಹೊಂದಿದ್ದು ಮಾನವ ಸೇವನೆಗೆ ಯೋಗ್ಯವಾಗಿದ್ದುದರಿಂದ ಸದರಿ ಮದ್ಯಸಾರವನ್ನು ಯಾರೂ ತನ್ನದೆಂದು ಕೋರಿ ಮುಂದೆ ಬಂದಿಲ್ಲವಾದ ಕಾರಣ ಮದ್ಯಸಾರವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಸಾರಾಯಿ ಸಂಸ್ಕರಣಾ ಘಟಕಕ್ಕೆ ಈ ಪ್ರಾಧಿಕಾರವು ಹಂಚಿ ಆದೇಶ ನೀಡಿರುತ್ತದೆ. ಅಲ್ಲದೆ ಉಳಿದ ಮದ್ಯವು ಮಾನವ ಸೇವನೆಗೆ ಯೋಗ್ಯವಲ್ಲದ ಕಾರಣ ಸದರಿ ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ನಾಶಪಡಿಸಲು, ಉಳಿದ ಎಲ್ಲಾ ವಸ್ತುಗಳನ್ನು, ವಾಹನವನ್ನು ಹೊರತುಪಡಿಸಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಬಹಿರಂಗ ಹರಾಜಿನ ಮೂಲಕ ಸ್ವತ್ತುಗಳನ್ನು ವಿಲೇವಾರಿ ಮಾಡಲು ಆದೇಶವನ್ನು ದಿನಾಂಕ: 17.04.2004ರಂದು ಈ ಪ್ರಾಧಿಕಾರವು ನೀಡಿರುತ್ತದೆ.

ಈ ಪ್ರಕರಣದಲ್ಲಿ ಜಪ್ತು ಪಡಿಸಲಾಗಿರುವ ವಾಹನದ "ಬಿ" ಎಕ್ಸ್‌ಟ್ರಾಕ್ಟನ್ನು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಮಂಗಳೂರು ಇವರು ನೀಡಿದ್ದು, ಸದರಿ ವರದಿಯ ಪ್ರಕಾರ ದಿನಾಂಕ:14.01.2004ರಂದು ಮಹಮ್ಮದ್ ಖಾಲಿದ್ ಬಿನ್ ಅಬ್ದುಲ್ ರಹಿಮಾನ್, ಅಲ್ಲಿಬಾವ ಕಂಪೌಂಡ್, ಬಂದರು, ಮಂಗಳೂರು ಇವರು ವಾಹನ ಮಾಲಿಕರಾಗಿದ್ದು, ಸದರಿ ವಾಹನವನ್ನು ದಿನಾಂಕ:19.01.2004ರಂದು ಈ ಪ್ರಕರಣದ ಆರೋಪಿಯಾದ ಜೋಜೊ ಆಂಟೋನಿ, ಬಿನ್ ಟಿ.ವಿ. ಆಂಟೋನಿ, 2ನೇ ಅಡ್ಡರಸ್ತೆ, ಮಂಗಳೂರು ಇವರಿಗೆ ಮಾರಾಟ ಮಾಡಿದ್ದು ವಾಹನದ ಮಾಲೀಕತ್ವವನ್ನು ಬದಲಾವಣೆ ಮಾಡಿರುವುದು ಕಂಡು ಬಂದಿದ್ದು ಈ ಮೇಲಿನ 2 ವ್ಯಕ್ತಿಗಳಿಗೂ ಈ ಪ್ರಾಧಿಕಾರವು ಕಾರಣ ಕೇಳಿ ನೋಟೀಸನ್ನು ದಿನಾಂಕ: 17.04.2004ರಂದು ನೀಡಲಾಗಿದ್ದು, ಎರಡೂ ನೋಟೀಸುಗಳು ಸ್ವೀಕೃತಗೊಳ್ಳದೆ ಹಿಂದಕ್ಕೆ ಬಂದಿರುತ್ತವೆ. ಈ ಪ್ರಕರಣವನ್ನು ದಾಖಲು ಮಾಡಿ ವಾಹನವನ್ನು ವಶಪಡಿಸಿಕೊಂಡು 5 ತಿಂಗಳ ಅವಧಿ ಕಳೆದಿದ್ದರೂ ಯಾವುದೇ ವ್ಯಕ್ತಿಯು ವಾಹನವನ್ನು ತನ್ನದೆಂದು ಕೋರಿ ವಾಹನದ ಬಿಡುಗಡೆಗಾಗಿ ಈ ಪ್ರಾಧಿಕಾರದ ಮುಂದೆ ಹಾಜರಾಗಿರುವುದಿಲ್ಲ ಹಾಗೂ ಯಾವುದೇ ಅರ್ಜಿಯನ್ನು ಸಲ್ಲಿಸಿರುವುದಿಲ್ಲ.

ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43ರ ಅಡಿಯಲ್ಲಿ ಪ್ರಕರಣವನ್ನು ದಾಖಲು ಮಾಡುವಾಗ ಆರೋಪಿಯು ಪತ್ತೆಯಾಗದಿದ್ದಲ್ಲಿ ಅಥವಾ ಪತ್ತೆಯಾಗುವ ಸಾಧ್ಯತೆಗಳು ಇಲ್ಲದಿದ್ದಲ್ಲಿ ಹಾಗೂ ಪ್ರಕರಣವನ್ನು ಪತ್ತೆ ಹಚ್ಚಿ ಒಂದು ತಿಂಗಳೊಳಗೆ ಯಾವುದೇ ವ್ಯಕ್ತಿಯು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸದರಿ ಸ್ವತ್ತುಗಳು ತಮ್ಮವೆಂದೂ, ಅವುಗಳು ಕಾನೂನುಬದ್ಧವಾಗಿವೆ ಎಂದು ಸಾಕ್ಷ್ಯಾಧಾರಗಳನ್ನು ಹಾಜರುಪಡಿಸದೇ ಇದ್ದಲ್ಲಿ ಸದರಿ ಸ್ವತ್ತುಗಳು ಅಬಕಾರಿ ಕಾಯಿದೆ ಕಲಂ 43ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವ ವಸ್ತುಗಳಾಗಿದ್ದಲ್ಲಿ ಕಲಂ 43 (ಸಿ) ಅಡಿಯಲ್ಲಿ ಈ ಪ್ರಾಧಿಕಾರವು ಅಕ್ರಮ ಮದ್ಯವನ್ನು ಮತ್ತು ಸಾಗಾಣಿಕೆಗೆ ಬಳಸಿದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿರುತ್ತದೆ.

ಈ ಪ್ರಕರಣವು ದಾಖಲಾಗಿ 5 ತಿಂಗಳು ಕಳೆದಿದ್ದರೂ ಜಪ್ತು ಪಡಿಸಲಾಗಿರುವ ವಾಹನವು ತನ್ನದೆಂದು ಕೋರಿ ವಾಹನದ ಬಿಡುಗಡೆಗಾಗಿ ಯಾವುದೇ ವ್ಯಕ್ತಿಯು ಪ್ರಾಧಿಕಾರದ ಮುಂದೆ ಹಾಜರಾಗಿರುವುದಿಲ್ಲ ಹಾಗೂ ಯಾವುದೇ ಅರ್ಜಿಯನ್ನು ನೀಡಿರುವುದಿಲ್ಲ.

ಈ ಪ್ರಕರಣದಲ್ಲಿ ಆರೋಪಿಯು ಅಕ್ರಮವಾಗಿ 108 ಲೀಟರ್ ನಕಲಿ ಮದ್ಯವನ್ನು ಅಧಿಕೃತ ದಾಖಲಾತಿಗಳಿಲ್ಲದೆ ವಾಹನ ಸಂಖ್ಯೆ: ಕೆಎ-19ಎಂ-3505 ರಲ್ಲಿ ಹೊಂದಿ ಸಾಗಾಟ ಮಾಡಲು ಅಣಿ ಮಾಡಿದ್ದಾಗ ಅಬಕಾರಿ ನಿರೀಕ್ಷಕರು, ಗುಪ್ತವಾರ್ತಾದಳ, ಮಂಗಳೂರು ಇವರು ವಾಹನವನ್ನು ಪತ್ತೆ ಮಾಡಿ ಸ್ಥಳ ಮಹಜರಿನೊಂದಿಗೆ ಜಪ್ತು ಮಾಡಿರುವುದರಿಂದ, ಜಪ್ತು ಪಡಿಸಲಾಗಿರುವ ವಸ್ತುಗಳು ರಾಸಾಯನಿಕ ತಜ್ಞರ ವರದಿಯ ಪ್ರಕಾರ ಮದ್ಯವೆಂದು ರುಜುವಾತಾಗಿರುವುದರಿಂದ ಈ ಪ್ರಕರಣದಲ್ಲಿ ಜಪ್ತಾಗಿರುವ ವಾಹನವನ್ನು ಅಬಕಾರಿ ಕಾಯಿದೆ ಉಲ್ಲಂಘನೆಗಾಗಿ ಬಳಸಿರುವುದು ಸಾಬೀತಾಗಿದ್ದು ಇದನ್ನು ಪ್ರಾಧಿಕಾರವು ನಂಬಲೇಬೇಕಾಗುತ್ತದೆ.

ಈ ಪ್ರಕರಣವನ್ನು ದಾಖಲಿಸಿ 5 ತಿಂಗಳು ಕಳೆದಿದ್ದರೂ ವಾಹನ ಹಾಗೂ ಮದ್ಯ ತಮ್ಮದೆಂದು ಕೋರಿ ಯಾವುದೇ ವ್ಯಕ್ತಿಯು ಮುಂದೆ ಬಂದಿಲ್ಲದಿರುವುದನ್ನು ಗಮನಿಸಿದರೆ ವಾಹನ ಮಾಲಿಕರೇ ವಾಹನವನ್ನು ಇಂತಹ ಅಕ್ರಮ ಕೃತ್ಯಕ್ಕೆ ಬಳಸಿರುವುದು ಕಂಡು ಬರುತ್ತದೆ. ಹಾಗೂ ವಾಹನ ಮಾಲಿಕರ ತಿಳುವಳಿಕೆಯಿಂದಲೇ ಈ ಕೃತ್ಯವು ನಡೆದಿದೆ ಎಂದು ಭಾವಿಸಬೇಕಾಗುತ್ತದೆ. ಅಲ್ಲದೆ, ಈ ಪ್ರಕರಣದಲ್ಲಿ ವಾಹನವನ್ನು ದಿನಾಂಕ:14.01.04ರಲ್ಲಿ ಜಪ್ತುಪಡಿಸಿದ್ದು ಆ ದಿನದಂದು ಮೊಹಮ್ಮದ್ ಖಾಲಿದ್ ಎಂಬವರು ವಾಹನ ಮಾಲಿಕರಾಗಿದ್ದು ಸದರಿ ವಾಹನವನ್ನು ದಿನಾಂಕ: 19.01.04ರಂದು ಈ ಪ್ರಕರಣದ ಆರೋಪಿಯಾಗಿರುವ ಜೋಜೊ ಆಂಟೋನಿಗೆ ಮಾರಾಟ ಮಾಡಿರುವುದು ಈ ಅಕ್ರಮ ಕೃತ್ಯಕ್ಕೆ ವಾಹನವನ್ನು ತೊಡಗಿಸಿರುವುದಕ್ಕೆ ಪುಷ್ಟಿ ನೀಡುತ್ತದೆ.

ಈ ಮೇಲಿನ ಎಲ್ಲಾ ಅಂಶಗಳಿಂದ ಹಾಗೂ ಲಭ್ಯವಿರುವ ದಾಖಲಾತಿಗಳನ್ನು ಪರಿಶೀಲಿಸಲಾಗಿ ಹಾಗೂ ವಾಹನವನ್ನು ತನ್ನದೆಂದು ಕೋರಿ ಯಾರೂ ಪ್ರಾಧಿಕಾರದ ಮುಂದೆ ಹಾಜರಾಗದೇ ಇರುವುದರಿಂದ ಪ್ರಕರಣವನ್ನು ಏಕ ಪಕ್ಷೀಯವಾಗಿ ನಿರ್ಧಾರ ತೆಗೆದುಕೊಳ್ಳುವುದು ಸೂಕ್ತ ಎಂದು ಪ್ರಾಧಿಕಾರವು ತೀರ್ಮಾನಿಸಿ ಈ ಕೆಳಗಿನ ಆದೇಶ ಹೊರಡಿಸಲಾಗಿದೆ.

**ಆದೇಶ**

ಗೋವಿಂದಪ್ಪ ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಅಧಿನಿಯಮ 1965 ಕಲಂ 43(ಎ) ಯಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ 43(ಬಿ) ರೀತ್ಯಾ ಅನುಸರಿಸಬೇಕಾಗಿರುವ ಕ್ರಮಗಳನ್ನು ಅನುಸರಿಸಿ 43(ಸಿ) ರೀತ್ಯಾ ಮೊಕದ್ದಮೆ ಸಂಖ್ಯೆ: 14/03-04 ದಿನಾಂಕ: 14.01.04ರಲ್ಲಿ ವಶಪಡಿಸಿಕೊಂಡಿರುವ ಮಾರುತಿ ವ್ಯಾನು ಸಂಖ್ಯೆ: ಕೆಎ-19ಎಂ-3505ನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಅಧಿಕೃತ ಅಧಿಕಾರಿಗಳು ಹಾಗೂ
ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

ಪಿ.ಆರ್. 1073

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯ, ಬೆಂಗಳೂರು-09**

**ತಿದ್ದುಪಡಿ**

**ಸಂಖ್ಯೆ: ಡಿಪಿಎನ್ (7):ಸಿಆರ್:27:00-01, ಬೆಂಗಳೂರು, ದಿನಾಂಕ:12ನೇ ಜುಲೈ, 2004**

ಶ್ರೀಮತಿ ಕೆ.ಎಂ. ಧನಲಕ್ಷ್ಮಿ ಕಿರಿಯ ಮಹಿಳಾ ಆರೋಗ್ಯ ಸಹಾಯಕಿ, ಪ್ರಾಥಮಿಕ ಆರೋಗ್ಯ ಕೇಂದ್ರ, ಮುಳಬಾಗಿಲು, ಕೋಲಾರ ಜಿಲ್ಲೆ, ಇವರು ಈ ಹಿಂದೆ ಪ್ರಾಥಮಿಕ ಆರೋಗ್ಯ ಕೇಂದ್ರ, ಪಾಂಡವಪುರ, ಮಂಡ್ಯ ಜಿಲ್ಲೆ, ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಸರ್ಕಾರಿ ಸೇವೆಗೆ ಅನಧಿಕೃತ ಗೈರು ಹಾಜರಿಯಾದ ಅವಧಿ ಬಗ್ಗೆ ಅಂತಿಮ ಆದೇಶದ ಸಂಖ್ಯೆ: ಡಿಪಿಎನ್ (7):ಆರ್:27:2000-01, ದಿನಾಂಕ:24.04.2004ರ ಆದೇಶದಲ್ಲಿ ಅನಧಿಕೃತ ಗೈರು ಹಾಜರಿಯ ದಿನಾಂಕ: 13.02.1978 ರಿಂದ ದಿನಾಂಕ: 10.10.1998ರ ವರೆಗಿನ ಅವಧಿ ಎಂದಿರುವುದನ್ನು ದಿನಾಂಕ: 10.10.1978ರಿಂದ ದಿನಾಂಕ:06.03.1989ರವರೆಗೆ ಎಂದು ಓದಿಕೊಳ್ಳತಕ್ಕದ್ದು.

ನಿರ್ದೇಶಕರು,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು.

ಪಿ.ಆರ್. 1074

**ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಶನರ್ ಆಫ್ ಎಕ್ಸೈಜ್, ಉತ್ತರ ಕನ್ನಡ ಜಿಲ್ಲೆ**

**ಕಾರವಾರ ರವರ ನ್ಯಾಯಾಲಯ**

**ಉಪಸ್ಥಿತರು:** ಕೆ.ಸಿ. ಹರಿದಾಸ್, ಕೆ.ಇ.ಎಸ್.,
ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಉತ್ತರ ಕನ್ನಡ ಜಿಲ್ಲೆ, ಕಾರವಾರ.

| **ಫಿರ್ಯಾದಿ :** | **ವಿರುದ್ಧ** | **ಆರೋಪಿ** |
|---|---|---|
| 1. ಯು.ಕೆ. ನಾಯ್ಕ, ಅಬಕಾರಿ ನಿರೀಕ್ಷಕರು, ಗುಪ್ತವಾರ್ತಾ ವಿಭಾಗ, ಕಾರವಾರ. | | 1. ಆರೋಪಿ ವಾಹನ ಚಾಲಕ ಪರಾರಿಯಾಗಿದ್ದು, ದಸ್ತಗಿರಿಯಾಗಿರುವುದಿಲ್ಲ. |

ಈ ಆರೋಪವನ್ನು ಕ.ಅ. ಕಾಯ್ದೆ 1965ರ ಕಲಂ 32 ಮತ್ತು 34 ರಂತೆ ಹೊರಿಸಿ, ಜಪ್ತಿಯಾದ ಸ್ವತ್ತುಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಲು ಸಲ್ಲಿಸಿದ ಪ್ರಸ್ತಾವನೆಯಾಗಿರುತ್ತದೆ.

**ತೀರ್ಪು**

1. ಅಬಕಾರಿ ನಿರೀಕ್ಷಕರು, ಗುಪ್ತ ವಾರ್ತಾ ವಿಭಾಗ, ಕಾರವಾರ ಇವರು ದಿನಾಂಕ: 09.08.2003ರಂದು ಬೆಳಗಿನ ಜಾವ 1-00 ಗಂಟೆಯ ಸಮಯಕ್ಕೆ ಖಚಿತವಾದ ವರ್ತಮಾನದ ಮೇರೆಗೆ ತನ್ನ ಮೇಲಾಧಿಕಾರಿಯ ನೇತೃತ್ವದಲ್ಲಿ ತನ್ನ ಸಿಬ್ಬಂದಿಗಳೊಂದಿಗೆ ಕಾರವಾರ ತಾಲ್ಲೂಕಿನ ಮಾಜಾಳಿ ಗ್ರಾಮದ ರಾಷ್ಟ್ರೀಯ ಹೆದ್ದಾರಿ ಮೇಲಿರುವ ಸೇಲ್ಸ್ ಟ್ಯಾಕ್ಸ್ ತನಿಖಾ ಠಾಣೆಯ ಹತ್ತಿರ ಬರುತ್ತಿದ್ದಂತಹ ಒಂದು ಲಾರಿ ಸಂಖ್ಯೆ: ಎಟಿಎ-868 ನೇದನ್ನು ನಿಲ್ಲಿಸುವಂತೆ ಕೈಸನ್ನೆ ಮಾಡಲಾಗಿ, ಸದರಿ ಲಾರಿಯ ಚಾಲಕನು ಕೆಲವೇ ಅಂತರದಲ್ಲಿ ಲಾರಿ ನಿಲ್ಲಿಸಿ ಹತ್ತಿರದಲ್ಲಿ ಇದ್ದಂತಹ ಕಾಡಿನತ್ತ ಓಡತೊಡಗಿದನೆಂದೂ ಆತನನ್ನು ಹಿಡಿಯಲು ಪ್ರಯತ್ನಿಸಿದಾಗಲೂ ಆತ ಸಿಗದಿದ್ದಾಗ ಸಂಶಯದಿಂದ ಸಿಬ್ಬಂದಿಗಳ ಸಹಾಯದಿಂದ ಲಾರಿಯನ್ನು ತಪಾಸಣೆ ಮಾಡಿ ನೋಡಲು ಲಾರಿಗೆ ಮೇಲೆ ಹಗ್ಗ ಕಟ್ಟಿದ ಟರಪಾಲು ಇದ್ದು, ಅದನ್ನು ಸರಿಸಿ ನೋಡಲಾಗಿ ಮೇಲ್ಗಡೆ ಮರದ ಹೊಟ್ಟು ತುಂಬಿದ 40 ಪಾಲಿಥಿನ್ ಚೀಲಗಳು ಇದ್ದದ್ದು ಕಂಡುಬಂದವೆಂದೂ ಅವುಗಳ ಕೆಳಗಡೆ ರಟ್ಟಿನ ಪೆಟ್ಟಿಗೆಗಳು ಇದ್ದದ್ದು ಕಂಡುಬಂದಿದ್ದು, ಅವುಗಳಲ್ಲಿ ಪ್ರತಿಯೊಂದರಲ್ಲಿ 180 ಮಿ.ಲೀ.ನ 48 ಸೀಸೆಗಳಂತೆ ಇರುವ ಒಟ್ಟೂ 500 ಪೆಟ್ಟಿಗೆ ವೆಸ್ಟರ್ನ್ ಬ್ಲೆಂಡ್ ವಿಸ್ಕಿ ಇದ್ದದ್ದು ಕಂಡುಬಂದಿದ್ದರಿಂದ ವಾಹನದಲ್ಲಿ ತಪಾಸಣೆ ಮಾಡಿನೋಡಲಾಗಿ ಯಾವುದೇ ರೀತಿಯ ಕಾಗದ ಪತ್ರಗಳು ಕಂಡು ಬರದಿದ್ದ ಕಾರಣ ಸದರಿ ಮದ್ಯಸಾರದ ಸ್ವತ್ತುಗಳನ್ನು ಸಾಗಿಸಲು ಯಾವುದೇ ರೀತಿಯ ಪಾಸ್ ಅಥವಾ ಪರ್ಮಿಟ್ ಇಲ್ಲದಿರುವುದು ಕಂಡುಬಂದಿದ್ದರಿಂದ ಇದು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 11 ಮತ್ತು 14ರ ಪ್ರಕಾರ ಅಪರಾಧವಾಗಿರುವುದಾಗಿ ಹಾಗೂ ಕಲಂ 34, 38-ಎ ಮತ್ತು 43(ಎ) -2 ರನ್ವಯ ಶಿಕ್ಷಾರ್ಹವಾಗಿರುವುದಾಗಿ ಮುಂದಿನ ಜಪ್ತಿಕ್ರಮವನ್ನು ಜರುಗಿಸಿ, ತನ್ನ ಫಿರ್ಯಾದನ್ನು ದಾಖಲಿಸಿ ಗುಪ್ತವಾರ್ತಾ ವಿಭಾಗ, ಕಾರವಾರದ ಅಬಕಾರಿ ನಿರೀಕ್ಷಕರ ಗುನ್ನೆ ಸಂಖ್ಯೆ: ಇಎಕ್ಸ್ಇ/ ಇಐಬಿ/ ಐಇ/2/ ಎಫ್ಐಆರ್ ನಂ.4/ 2003-04 ದಿನಾಂಕ: 09.08.2003ರಂತೆ ಪ್ರಕರಣವನ್ನು ದಾಖಲಿಸಿ ಪ್ರಕರಣಕ್ಕೆ ಸಂಬಂಧಪಟ್ಟ ದಾಖಲೆಗಳನ್ನು ಈ ಪ್ರಾಧಿಕಾರಕ್ಕೆ ಮುಂದಿನ ಕ್ರಮಕ್ಕಾಗಿ ಸಲ್ಲಿಸಿರುತ್ತಾರೆ.

2. ಈ ಪ್ರಕರಣದ ತನಿಖಾಧಿಕಾರಿಗಳಾದ ಅಬಕಾರಿ ಉಪ ನಿರೀಕ್ಷಕರು, ಕಾರವಾರ ಉಪ ವಲಯ ಇವರ ಪತ್ರ ಸಂಖ್ಯೆ: ಅಬಕಾರಿ/ ಸಿಆರ್‌ಎಂ/ ಮುಟ್ಟುಗೋಲು/ 11/ 2003-04, ದಿನಾಂಕ: 05.12.2003ರಂತೆ ಈ ಪ್ರಕರಣದಲ್ಲಿ ತೆಗೆಯಲಾದ ಮಾದರಿ ಸೀಸೆಗಳ ಬಗೆಗಿನ ರಾಸಾಯನಿಕ ವರದಿಯ ನಕಲನ್ನು ಲಗತ್ತಿಸಿ, ಜಪ್ತಿಯಾದ ಮದ್ಯ ಹಾಗೂ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಲು ವಿನಂತಿಸಿರುತ್ತಾರೆ. ಲಗ್ತ ಇರುವ ರಾಸಾಯನಿಕ ವಿಶ್ಲೇಷಣಾ ವರದಿ ಸಂಖ್ಯೆ: ಸಿಸಿಎಲ್/ 5280/ 2003, ದಿನಾಂಕ: 30.10.2003ರಲ್ಲಿ, ಮಾದರಿ ಸೀಸೆಗಳಲ್ಲಿ ಆಲ್ಕೋಹಾಲ್ ಪತ್ತೆಯಾಗಿದ್ದು, ಅದರಲ್ಲಿನ ಮದ್ಯಸಾರದ ಅಂಶವು 26.3 ಯು.ಪಿ. ಯಷ್ಟು ಇರುವುದಾಗಿ ತಜ್ಞರು ಅಭಿಪ್ರಾಯಪಟ್ಟಿರುತ್ತಾರೆ. ಸದರಿ ವರದಿಯನ್ನಾಧರಿಸಿ ಪ್ರಾಧಿಕಾರದ ಆದೇಶ ಸಂಖ್ಯೆ: ಡಿಟಿಸಿಆರ್/ 63/2003-04, ದಿನಾಂಕ: 02.01.2004ರಂತೆ ಈ ಪ್ರಕರಣದಲ್ಲಿ ಜಪ್ತಿಯಾದಂತಹ 500 ಪೆಟ್ಟಿಗೆ ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿ ವಿಲೇವಾರಿಗೆ ಆದೇಶಿಸಲಾಗಿದೆ.

3. ಅನಂತರ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಬೆಂಗಳೂರು (ಕೇಂದ್ರ) ಇವರು ಪತ್ರ ಸಂಖ್ಯೆ: ಪ್ರಾ.ಸಾ.ಅ.ಬೆಂ (ಕೇ)/ ನೋ/ ವಿ/ ಎಟಿಎ/ 868/2003-04, ದಿನಾಂಕ: 04.02.2004ರಂತೆ ಈ ಪ್ರಾಧಿಕಾರಕ್ಕೆ ಕಳುಹಿಸಿರುವ ಬಿ ರಿಜಿಸ್ಟರ್ ಎಕ್ಸ್‌ಟ್ರಾಕ್ಟ್ ನಲ್ಲಿ ದಿನಾಂಕ: 21.01.2003ರಿಂದ ವಾಹನ ಸಂಖ್ಯೆ: ಎಟಿಎ-868 ನೇದಕ್ಕೆ ಚಂದ್ರಶೇಖರ ತಂದೆ ದೊರೈಸ್ವಾಮಿ, ನಂ.25, ಲಕ್ಷ್ಮಿರೋಡ್, ಶಾಂತಿನಗರ, ಬೆಂಗಳೂರು-560 027 ಈತನೇ ವಾಹನದ ಮಾಲಿಕನಾಗಿರುವುದಾಗಿ ಕಂಡುಬಂದಿರುತ್ತದೆ.

4. ಈ ಪ್ರಕರಣದಲ್ಲಿ ಜಪ್ತಿಯಾದಂತಹ ವಾಹನ ಹಾಗೂ ಮದ್ಯಸಾರದ ಸ್ವತ್ತುಗಳನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬುದಕ್ಕಾಗಿ ಕಲಂ 43 ಬಿ(1) ಎ ರಂತೆ 15 ದಿನಗಳ ಗಡುವು ನೀಡಿ ಕಾರಣ ಕೇಳಿ ನೋಟೀಸನ್ನು ಮೇಲ್ಕಾಣಿಸಿದವರಿಗೆ ದಿನಾಂಕ: 20.02.2004ರಂದು ನೋಂದಾಯಿತ ಅಂಚೆಯ ಮೂಲಕ ಕಳುಹಿಸಲಾಗಿ, ಇಂತಹ ಹೆಸರಿನವರು ಈ ವಿಳಾಸದಲ್ಲಿ ಇರುವುದಿಲ್ಲವಾಗಿ ಏಳು ದಿನಗಳವರೆಗೆ ಕಾಯ್ದು ನಂತರ ಅಂಚೆ ಲಕೋಟೆಯು ಮರಳಿ ಬಂದಿರುತ್ತದೆ.

5. ವಾಹನದ ಮಾಲಿಕರಿಗೆ ಇನ್ನೂ ಹೆಚ್ಚಿನ ಅವಕಾಶವನ್ನು ನೀಡುವ ಉದ್ದೇಶದಿಂದ ಸದರಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದರ ವಿರುದ್ಧ ಯಾರದಾದರೂ ತಕರಾರು ಅಥವಾ ಹೇಳಿಕೆಯನ್ನು ಸಲ್ಲಿಸುವುದಿದ್ದಲ್ಲಿ ಪ್ರಕಟಣೆ ಹೊರಡಿಸಿದ 15 ದಿನಗಳೊಳಗಾಗಿ ಸಲ್ಲಿಸುವಂತೆ ದಿನಾಂಕ:13.05.2004ರ ವಿಜಯ ಕರ್ನಾಟಕ ದಿನಪತ್ರಿಕೆಯಲ್ಲಿ ಸಾರ್ವಜನಿಕ ಪ್ರಕಟಣೆಯನ್ನು ರಾಜ್ಯಾದ್ಯಂತ ಹೊರಡಿಸಲಾಗಿರುತ್ತದೆ.

6. ಈ ಪ್ರಕರಣದಲ್ಲಿ ಫಿರ್ಯಾದುದಾರರು ಮತ್ತು ತನಿಖಾಧಿಕಾರಿಗಳು ಸಲ್ಲಿಸಿರುವ ದಾಖಲೆಗಳು ಅಭಿಯೋಜನೆಗೆ ಪೂರಕವಾಗಿದ್ದು, ಸದರಿ ದಾಖಲೆಗಳು ಹಾಗೂ ಪ್ರಕರಣದ ಸಂಪೂರ್ಣ ವಿದ್ಯಮಾನವನ್ನು ಗಮನಿಸಿದಾಗ ಈ ಪ್ರಕರಣದಲ್ಲಿ ಜಪ್ತಿಯಾದ ವಾಹನದಲ್ಲಿ ಅಕ್ರಮವಾಗಿ ಮದ್ಯವನ್ನು ಸಾಗಿಸಿರುವುದು ಮೇಲ್ನೋಟಕ್ಕೆ ಸ್ಪಷ್ಟವಾಗಿ ಸಾಬೀತಾಗುತ್ತದೆ.

7. ಈ ಪ್ರಕರಣ ದಾಖಲಾಗಿ ಈಗಾಗಲೇ 11 ತಿಂಗಳುಗಳು ಕಳೆದರೂ ಹಾಗೂ ಪತ್ರಿಕಾ ಪ್ರಕಟಣೆಯಲ್ಲಿನ ಗಡುವು ಮುಗಿದರೂ ಸಹ ಜಪ್ತಿಯಾದ ವಾಹನವು ತನ್ನದೆಂದಾಗಲೀ ಈ ಬಗ್ಗೆ ತಾನು ವಿಚಾರಣೆಯನ್ನು ನಡೆಸುತ್ತೇನೆಂದಾಗಲೀ ಯಾರೂ ಇಂದಿನವರೆಗೂ ಖುದ್ದಾಗಿ ಆಗಲೀ ಅಥವಾ ತನ್ನ ವಕೀಲರ ಮೂಲಕವಾಗಲೀ ಅರ್ಜಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ. ವಾಹನದ ಮಾಲಿಕರಿಗೆ ಸಾಕಷ್ಟು ದಿನಗಳ ಕಾಲಾವಕಾಶವನ್ನು ನೀಡಿದಾಗಲೂ ಸಹ ಇವರು ಈ ಪ್ರಾಧಿಕಾರದಲ್ಲಿ ತನ್ನ ಹಕ್ಕನ್ನು ಸ್ಥಾಪಿಸದೇ ಇರುವುದರಿಂದ ಸದರಿಯವರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಅಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಇದೇ ಕಾರಣದಿಂದ ಅವರು ಪತ್ರಿಕಾ ಪ್ರಕಟಣೆ ಹೊರಡಿಸಿದ ನಂತರವೂ ಅರ್ಜಿಯನ್ನು ಸಲ್ಲಿಸದಿರುವುದು ಕಂಡುಬರುತ್ತದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನದ ಮಾಲಿಕರಿಗೆ ಅಥವಾ ಏಜೆಂಟರ ಗಮನಕ್ಕೆ ಬಾರದೆ ಮತ್ತು ಅವರುಗಳು ಶಾಮೀಲಾಗದೇ ಹಾಗೂ ಅವರೆಲ್ಲರಿಗೂ ಅರಿವಿಲ್ಲದಂತೆ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿರುವುದಿಲ್ಲವಾದುದರಿಂದ ಸದರಿ ವಾಹನವನ್ನು ಇನ್ನೂ ಹಾಗೆಯೇ ಇಡುವುದರಿಂದ ಯಾವುದೇ ಪ್ರಯೋಜನ ಇರದಿರುವುದನ್ನು ಮನಗಂಡು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡು ಬಂದಿರುವುದರಿಂದ ಈ ಕೆಳಗಿನಂತೆ

**ಆದೇಶ**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43 ಬಿ ಪ್ರಕಾರ ಅನುಸರಿಸಬೇಕಾದ ಕ್ರಮಗಳನ್ನೆಲ್ಲಾ ಅನುಸರಿಸಿದ ನಂತರ ಕಲಂ 43 ಎ (1) ರನ್ವಯ ನನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕಾರವಾರ ಗುಪ್ತ ವಾರ್ತಾ ವಿಭಾಗದ ಅಬಕಾರಿ ನಿರೀಕ್ಷಕರ ಗುನ್ಹೆ ಸಂಖ್ಯೆ: ಇಎಕ್ಸ್‌ಇ/ ಇಐಬಿ/ಐ೯-2/ ಎಫ್‌ಐಆರ್ ನಂ. 04/2003-04 ದಿನಾಂಕ: 09.08.2003 ರಲ್ಲಿ ಜಪ್ತಿಯಾದಂತಹ ಲಾರಿ ಸಂಖ್ಯೆ: ಎಟಿಎ-868 ನೇದನ್ನು ಕಲಂ 43 ಎ (2) ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿ ಆದೇಶಿಸಿದ್ದೇನೆ.

ವಾಹನದ ಹರಾಜಿನ ಬಗ್ಗೆ ಪ್ರತ್ಯೇಕ ಪ್ರಕಟಣೆಯನ್ನು ಹೊರಡಿಸಲಾಗುವುದು.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಗೆ ಬರುವುದು.

(ಈ ಆದೇಶವನ್ನು ಇಂದು ಅಂದರೆ 2004ನೇ ಇಸವಿಯ ಜೂನ್ ತಿಂಗಳ 30ನೇ ತಾರೀಖಿನಂದು ವಿಷಯನಿರ್ವಾಹಕರಿಗೆ ಉಕ್ತ ಲೇಖನ ನೀಡಿ ನಂತರ ಗಣಕೀಕೃತಗೊಳಿಸಿ ಪ್ರಾಧಿಕಾರದ ಸೀಲ್ ಮೊಹರಿನೊಂದಿಗೆ ಹೊರಡಿಸಲಾಗಿದೆ.)

**ಕೆ.ಸಿ. ಹರಿದಾಸ್**
ಅಧಿಕೃತ ಅಧಿಕಾರಿಗಳು ಹಾಗೂ
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್,
ಉತ್ತರ ಕನ್ನಡ ಜಿಲ್ಲೆ, ಕಾರವಾರ.

ಪಿ.ಆರ್. 1075

## ಉಪನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೆಂಗಳೂರು ನಗರ ಜಿಲ್ಲೆ, ಇವರು ಹೊರಡಿಸಿರುವ ನಡವಳಿಗಳು

**ವಿಷಯ :** ಶ್ರೀ ಕೆ.ಎ. ಲಕ್ಷ್ಮೀನರಸಯ್ಯ ಸೇವಕರು ಅಂಗವಿಕಲರ ಕಲ್ಯಾಣ ವಿಭಾಗ, ಉಪನಿರ್ದೇಶಕರ ಕಛೇರಿ ಬೆಂಗಳೂರು ನಗರ ಇವರ ಅನಧಿಕೃತ ಗೈರು ಹಾಜರಿ ಕುರಿತು ಶಿಸ್ತು ವಿಚಾರಣೆ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಉಲ್ಲೇಖ :**
1. ಉನಿಬೆಂ:ನ: ಅಂ.ಕ. ವಿ:ವೈ.ಕ:02-03:03-04, ದಿನಾಂಕ: 09.05.03, 04.07.03, 23.09.03.
2. ಉನಿಬೆಂನ:ಅಂ.ಕ.ವಿ:ವೈ.ಕ:ಶಿ.ಕ್ರ:02-03:03-04 ದಿನಾಂಕ:05.12.2003.
3. ಸಿಹೆಚ್ಎಂ:ಸಿಬ್ಬಂದಿ:ಇ.ಪಿ.ಡಿ: 03-04 ದಿನಾಂಕ: 19.01.04, 02.02.04, 13.02.04.
4. ವಿಚಾರಣಾ ಪ್ರಾಧಿಕಾರ ಪತ್ರ ಸಂಖ್ಯೆ: ಸಿಹೆಚ್ಎಂ: ಸಿಬ್ಬಂದಿ:ಇ.ವಿ.ವ:04-05:17 ದಿನಾಂಕ:06.05.04.
5. ಉನಿಬೆಂ:ನ:ಕ.ವಿ.ಅಂ:ವೈ.ಕ:02-03:04-05, 151 ದಿನಾಂಕ:15.05.04.

**ಪ್ರಸ್ತಾವನೆ:**

ಶ್ರೀ ಕೆ.ಎ. ಲಕ್ಷ್ಮೀನರಸಯ್ಯ, ಸೇವಕರು, ಅಂಗವಿಕಲರ ಕಲ್ಯಾಣ ವಿಭಾಗ ಉಪನಿರ್ದೇಶಕರ ಕಛೇರಿ, ಬೆಂಗಳೂರು ನಗರ ಇವರು ದಿನಾಂಕ:03.03.2003 ರಿಂದ 07.03.2003ರವರೆಗೆ ಸಾಂದರ್ಭಿಕ ರಜೆ ಕೋರಿ ಅರ್ಜಿ ಸಲ್ಲಿಸಿದರು. ದಿನಾಂಕ:08.03.03 ಮತ್ತು 09.03.2003ರ ಸಾರ್ವತ್ರಿಕ ರಜೆಯ ನಂತರ ದಿನಾಂಕ:10.03.2003ಕ್ಕೆ ಕರ್ತವ್ಯಕ್ಕೆ ಹಾಜರಾಗಬೇಕಾಗಿತ್ತು. ಆದರೆ ಸದರಿಯವರು ಕಛೇರಿಯ ಕರ್ತವ್ಯಕ್ಕೆ ಹಾಜರಾಗದೇ ಅನಧಿಕೃತ ಗೈರುಹಾಜರಾಗಿರುತ್ತಾರೆ. ಈ ಕಾರಣದಿಂದ ಕಛೇರಿಯ ಕರ್ತವ್ಯಕ್ಕೆ ಹಾಜರಾಗುವಂತೆ ಹಾಗೂ ಗೈರುಹಾಜರಿಯ ಕುರಿತು ಸಮಜಾಯಿಷಿ ನೀಡುವಂತೆ ತಿಳಿಸಿ, ಉಲ್ಲೇಖ 1ರ ಉಪನಿರ್ದೇಶಕರ ಕಛೇರಿ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಬೆಂಗಳೂರು ಇವರ ಕಛೇರಿಯಿಂದ 09.05.2003, 04.07.2003 ಹಾಗೂ 23.09.2003ರಲ್ಲಿ ಜ್ಞಾಪನೆ ಹೊರಡಿಸಲಾಗಿದೆ, ಹಾಗೂ ಜ್ಞಾಪನೆಯನ್ನು ಶ್ರೀ ಕೆ.ಎ. ಲಕ್ಷ್ಮೀನರಸಯ್ಯ, ಸೇವಕರು ಇವರಿಗೆ ಜಾರಿ ಮಾಡಲಾಗಿದೆ. ಇವರಿಂದ ಸಮಜಾಯಿಷಿಯಾಗಲೀ, ಕಛೇರಿ ಕರ್ತವ್ಯಕ್ಕೆ ಹಾಜರಾಗದೇ ಇದ್ದ ಕಾರಣ, ಇವರ ವಿರುದ್ಧ ಶಿಸ್ತು ಕ್ರಮ ಜರುಗಿಸಲು ಉದ್ದೇಶಿಸಿ, ವಿಚಾರಣಾಧಿಕಾರಿಗಳನ್ನು ನೇಮಕ ಮಾಡಿ ಉಲ್ಲೇಖ 2ರಲ್ಲಿ ಆದೇಶಿಸಲಾಗಿದೆ. ವಿಚಾರಣಾ ಪ್ರಾಧಿಕಾರಿ, ಸದರಿ ಶ್ರೀ ಕೆ.ಎ. ಲಕ್ಷ್ಮೀನರಸಯ್ಯ, ಇವರಿಗೆ ವಿಚಾರಣೆಗೆ ಹಾಜರಾಗುವಂತೆ ತಿಳಿಸಿ ದಿನಾಂಕ: 01.01.04, 02.02.04 ಹಾಗೂ ದಿನಾಂಕ: 13.02.2004ರಲ್ಲಿ ವಿಚಾರಣೆ ನೋಟೀಸ್ ಅನ್ನು, ಸದರಿಯವರೇ ಜಾರಿ ಮಾಡಿರುತ್ತಾರೆ. ಹಾಗೂ ಉಲ್ಲೇಖ 4ರಲ್ಲಿ ವಿಚಾರಣಾ ವರದಿಯನ್ನು ನೀಡಿ, ಸದರಿ ನೌಕರರಿಗೆ ವಿಚಾರಣೆಗೆ ಹಲವಾರು ಬಾರಿ ಅವಕಾಶ ನೀಡಿದರೂ ಸಹ ವಿಚಾರಣೆಗೆ ಹಾಜರಾಗದೇ ಇರುವುದರಿಂದ ಇವರ ಮೇಲಿನ ಆರೋಪವು ರುಜುವಾತಾಗಿರುವುದಾಗಿ ವರದಿ ಸಲ್ಲಿಸಿರುತ್ತಾರೆ. ವರದಿಯ ಪ್ರತಿಯನ್ನು ಉಲ್ಲೇಖ 4ರಲ್ಲಿ ಸದರಿಯವರಿಗೆ ಜಾರಿ ಮಾಡಿದೆ. ಅನಧಿಕೃತ ಗೈರುಹಾಜರಿ ಆದೇಶ ರುಜುವಾತಾಗಿರುವುದರಿಂದ ಇವರನ್ನು ಕೆ.ಸಿ.ಎಸ್. (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, ನಿಯಮ 1957 ನಿಯಮ 4ರಲ್ಲಿ ನಿರ್ದಿಷ್ಟಪಡಿಸಿರುವ, ವಿಧಿಸಬಹುದಾದ ದಂಡನೆ ಅನುಸಾರ ಸೇವೆಯಿಂದ ವಜಾ ಮಾಡಲು, ಈ ಮುಂದಿನ ಆದೇಶ ಹೊರಡಿಸಲಾಗಿದೆ.

**ಆದೇಶ**

**ಸಂಖ್ಯೆ:ಉನಿಬೆಂ:ನ:ಅಂ.ಕ.ವಿ:ವೈ.ಕ:04-05/ 425, ದಿನಾಂಕ:14ನೇ ಜುಲೈ, 2004**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಹೆಚ್.ಸಿ. ಚಿದಾನಂದ, ಉಪನಿರ್ದೇಶಕರು ಹಾಗೂ ಶಿಸ್ತು ಪ್ರಾಧಿಕಾರಿಗಳು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಬೆಂಗಳೂರು (ನಗರ) ಜಿಲ್ಲೆ, ಬೆಂಗಳೂರು ಆದ ನಾನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957 ನಿಯಮ 9(2) ರನುಸಾರ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಕೆ.ಎ. ಲಕ್ಷ್ಮೀನರಸಯ್ಯ ಸೇವಕರು ಅಂಗವಿಕಲರ ಕಲ್ಯಾಣ ವಿಭಾಗ, ಉಪನಿರ್ದೇಶಕರ ಕಛೇರಿ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೆಂಗಳೂರು ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಕೆ.ಸಿ.ಎಸ್. (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 8ರಂತೆ ಸರ್ಕಾರಿ ಸೇವೆಯಿಂದ ವಜಾ ಮಾಡುವ ದಂಡನೆ ವಿಧಿಸಿ ಆದೇಶಿಸಿದೆ.

ಉಪ ನಿರ್ದೇಶಕರು,
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ,
ಬೆಂಗಳೂರುನಗರ ಜಿಲ್ಲೆ, ಬೆಂಗಳೂರು.

ಪಿ.ಆರ್. 1076

## PROCEEDINGS OF THE REGISTERING AUTHORITY AND REGIONAL TRANSPORT OFFICER; INDIRANAGAR: BANGALORE (EAST): BANGALORE-38

**Present:** Afzal Ahmed Khan, Regional Transport Officer & Registering Authority, Indiranagar, Bangalore (East).

**Sub:** Cancellation of registration certificate in respect of KA-01-A-1635 ARTICULATE Vehicle-Reg.,

**Ref :** Application Dated: 30.06.2004.

**Preamble:**

The registered owner of the ARTICULATED Vehicle No. KA-01-1635 M/s VOLVO INDIA PVT LTD PLOT No. 188/1, 6th MAIN HAL 2ND STAGE, INDIRANAGAR, Bangalore in his letter dated 30.06.2004 has requested to cancel the registration certificate. Since the M.V. is not road worthy and irrepairable

In view of the above facts I pass the following:

**ORDER**

**No. RTO. BNG.E.RGN/TR.PR. KA-01-A-1635/04-05, Dated: 19th July, 2004**

In exercise of the powers vested under Section 55(1) of the Motor Vehicle Act, 1988, I Afzal Ahmed Khan, Registering Authority & Regional Transport Officer, Bangalore (East) do hereby cancel the registration & Registration Certificate of KA-01-A-1635 ARTICULATED HGV w.e.f. 19.07.2004 as desired by the R/O under non-use condition without prejudice and subject to recover the arrears of tax or penalty due if any found later on.

The brief description of the M.V. is as follows:

| | | |
|---|---|---|
| 1. | M.V. No. | KA-01-A-1635 |
| 2. | Class of Vehicle | ARTICULATED HGV |
| 3. | Type of Body | OPEN |
| 4. | Chassis No. | YU2A4BIAXW8822431G1 |
| 5. | Engine No. | D12104797 |
| 6. | Year of Manufacture | AUGUST 1998 |

PR-1077

**AFZAL AHMED KHAN**
Regional Transport Officer & Registering Authority,
Indiranagar, Bangalore (East).

**PROCEEDINGS OF THE REGISTERING AUTHORITY AND REGIONAL TRANSPORT OFFICER; INDIRANAGAR: BANGALORE (EAST): BANGALORE-38**

**Present:** Afzal Ahmed Khan, Regional Transport Officer & Registering Authority, Indiranagar, Bangalore (East).

**Sub:** Cancellation of registration certificate in respect of KA-01-A-1637 ARTICULATE Vehicle-Reg.,

**Ref :** Application Dated: 30.06.2004.

**Preamble:**

The registered owner of the ARTICULATED Vehicle No. KA-01-1637 M/s VOLVO INDIA PVT LTD PLOT No. 188/1, 6th MAIN HAL 2nd STAGE INDIRANAGAR, Bangalore in his letter dated 30.06.2004 has requested to cancel the registration certificate. Since the M.V. is not road worthy and irrepairable

In view of the above facts I pass the following:

**ORDER**

**No. RTO. BNG.E.RGN/TR.PR. KA-01-A-1637/04-05, Dated: 19th July, 2004**

In exercise of the powers vested under Section 55(1) of the Motor Vehicle Act, 1988, I Afzal Ahmed Khan, Registering Authority & Regional Transport Officer, Bangalore (East) do hereby cancel the registration & Registration Certificate of KA-01-A-1637 ARTICULATED HGV w.e.f. 19.07.2004 as desired by the R/O under non-use condition without prejudice and subject to recover the arrears of tax or penalty due if any found later on.

The brief description of the M.V. is as follows:

| | | |
|---|---|---|
| 1. | M.V. No. | KA-01-A-1637 |
| 2. | Class of Vehicle | ARTICULATED HGV |
| 3. | Type of Body | OPEN |
| 4. | Chassis No. | YU2A4BIAIW8822234G1 |
| 5. | Engine No. | D12104796 |
| 6. | Year of Manufacture | AUGUST 1998 |

PR-1078

**AFZAL AHMED KHAN**
Regional Transport Officer & Registering Authority,
Indiranagar, Bangalore (East).

**ಅಧಿಕೃತ ಅಧಿಕಾರಿಗಳು ಮತ್ತು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಕೋಲಾರ ವಿಭಾಗ, ಕೋಲಾರ ಇವರ ನ್ಯಾಯಾಲಯದಲ್ಲಿ**

**ಕರ್ನಾಟಕ ಅರಣ್ಯ ಕಾಯಿದೆ 1963ರ 71 'ಬಿ' ಅನ್ವಯ ಪ್ರಕಟಣೆ**

**ಸಂಖ್ಯೆ: ಎ4:ಎಸ್.ಸಿ.ಸಿ.ಆರ್:18:2002-03, ದಿನಾಂಕ: 20ನೇ ಜುಲೈ, 2003**

ದಿನಾಂಕ:31.10.2002ರಂದು ವಲಯ ಅರಣ್ಯಾಧಿಕಾರಿಗಳು ಶ್ರೀನಿವಾಸಪುರ ಇವರು ಬಾಲ್ತಮುರಿ ಬೀಟ್ ವ್ಯಾಪ್ತಿಯ ಮುದಿಮಡಗು ರಾಯಲ್ಪಾಡು ರಸ್ತೆಯ ತಮ್ಮಲಪಲ್ಲಿ ಗ್ರಾಮದ ಸುಬ್ಬರಾಯನ ಕೆರೆ ಕಟ್ಟೆಯ ಬಳಿ ಶ್ರೀಗಂಧದ ಅಕ್ರಮ ಸಾಗಾಣಿಕೆಯಲ್ಲಿ ನಿರತವಾಗಿದ್ದ ಸ್ಕೂಟರ್‌ನ್ನು ವಶಪಡಿಸಿಕೊಂಡು ಮೊಕದ್ದಮೆ ದಾಖಲು ಮಾಡಿ ಕರ್ನಾಟಕ ಅರಣ್ಯ ಕಾಯಿದೆ 1963ರ 71 'ಎ' ಅಡಿ ನಡವಳಿ ನಡೆಸಲು ಹಾಜರು ಪಡಿಸಿರುತ್ತಾರೆ. ಇದುವರೆವಿಗೂ ಯಾರೊಬ್ಬರು ವಾಹನದ ಮಾಲಿಕತ್ವ ಕೋರಿ ಈ ನ್ಯಾಯಾಲಯಕ್ಕೆ ಹಾಜರಾಗಿರುವುದಿಲ್ಲ. ವಶಪಡಿಸಿಕೊಂಡ ವಾಹನ ವಿವರಗಳು ಈ ಕೆಳಗಿನಂತೆ ಇರುತ್ತದೆ.

| | | |
|---|---|---|
| 1. | ವಾಹನ | ಬಜಾಜ್ ಸ್ಕೂಟರ್ |
| 2. | ವಾಹನ ಸಂಖ್ಯೆ | ಸಿ.ಎನ್.ಜಿ. 3284 |
| 3. | ವಶಪಡಿಸಿಕೊಂಡ ಶ್ರೀಗಂಧ | 15 ಕೆಜಿ |
| 4. | ವಾಹನದ ಚಾಸಿಸ್ ಸಂಖ್ಯೆ | ಸಿ.ಸಿ.ಜಿ. 345453. |
| 5. | ವಾಹನದ ಇಂಜಿನ್ ಸಂಖ್ಯೆ: | 06 ಎಫ್: 379367 |

ಈ ಕಾರಣ ಸದರಿ ವಾಹನದ ಮಾಲಿಕತ್ವ ಹೊಂದಿರುವವರು ಮೂಲ ದಾಖಲೆಗಳೊಡನೆ, ತಾವು ಪ್ರಕರಣದಲ್ಲಿ ಭಾಗಿಯಲ್ಲವೆಂದು, ಈ ನ್ಯಾಯಾಲಯದಲ್ಲಿ 30 ದಿನಗಳೊಳಗಾಗಿ ಖುದ್ದಾಗಿ ಹಾಜರಾಗಲು ಸೂಚಿಸಿದೆ. ತಪ್ಪಿದಲ್ಲಿ ವಾಹನವನ್ನು ಕರ್ನಾಟಕ ಅರಣ್ಯ ಕಾಯಿದೆ 1963ರ 71 'ಎ' ವ್ಯಾಪ್ತಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿ ಆದೇಶಿಸಲಾಗುವುದು.

ಅಧಿಕೃತ ಅಧಿಕಾರಿಗಳು ಮತ್ತು
ಉಪ ಅರಣ್ಯ ಸಂರಕ್ಷಣಾಧಿಕಾರಿಗಳು,
ಕೋಲಾರ ವಿಭಾಗ, ಕೋಲಾರ.

ಪಿ.ಆರ್. 1079

## ಜಿಲ್ಲಾ ಅಧಿಕಾರಿಯವರ ಕಛೇರಿ, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖೆ, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು

### ಪ್ರಕಟಣೆ

**ಸಂಖ್ಯೆ: ಬಿಸಿಎಂ:ವಿನಿ:ಕಾಪತ:ಸಿಆರ್: 43:2004-05, ದಿನಾಂಕ: 20ನೇ ಜುಲೈ, 2004**

**ವಿಷಯ :** ಹಿಂದುಳಿದ ವರ್ಗಗಳ ಇಲಾಖಾ ಕಾರ್ಯಕ್ರಮದಡಿಯಲ್ಲಿ ಹಮ್ಮಿಕೊಳ್ಳಲಾದ ಹಿಂದುಳಿದ ವರ್ಗಗಳ ಕಾನೂನು ಪದವೀಧರರಿಗೆ ಕಾನೂನು ತರಬೇತಿ ನೀಡುವ ಬಗ್ಗೆ 2004-05ನೇ ಸಾಲಿನಲ್ಲಿ ಅರ್ಹ ಅಭ್ಯರ್ಥಿಗಳಿಂದ ಅರ್ಜಿ ಆಹ್ವಾನಿಸುವ ಕುರಿತು.

**ಉಲ್ಲೇಖ :** ಸರಕಾರಿ ಆದೇಶ ಸಂಖ್ಯೆ: ಎಸ್‌ಡಬ್ಲ್ಯೂಎಲ್:68:ಎಸ್‌ಇಡಬ್ಲ್ಯೂ89: ಬೆಂಗಳೂರು, ದಿನಾಂಕ:02.11.1990.

ಹಿಂದುಳಿದ ವರ್ಗಗಳ ಇಲಾಖಾ ಕಾರ್ಯಕ್ರಮದಡಿಯಲ್ಲಿ ಹಿಂದುಳಿದ ವರ್ಗಗಳ ಅರ್ಹ ಕಾನೂನು ಪದವೀಧರರಿಗೆ ಜಿಲ್ಲಾ ಪಬ್ಲಿಕ್ ಪ್ರಾಸಿಕ್ಯೂಟರ್/ ಸರ್ಕಾರಿ ವಕೀಲರು/ ಸೀನಿಯರ್ ಡಿಫೆನ್ಸ್ ಕೌನ್ಸಿಲರ್ ಅಧೀನದಲ್ಲಿ 4 ವರ್ಷಗಳ ಅವಧಿಯ ಕಾನೂನು ತರಬೇತಿ ನೀಡುವ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಗಿದ್ದು, ಈ ಕಾರ್ಯಕ್ರಮದಡಿ 2004-05ನೇ ಸಾಲಿನಲ್ಲಿ ಅರ್ಹ ಹಿಂದುಳಿದ ವರ್ಗಗಳ ಅಭ್ಯರ್ಥಿಗಳನ್ನು ತರಬೇತಿಗೆ ಆಯ್ಕೆ ಮಾಡುವ ಸಲುವಾಗಿ ಈ ಕೆಳಕಂಡ ಷರತ್ತಿಗೊಳಪಟ್ಟು ದಕ್ಷಿಣ ಕನ್ನಡ ಜಿಲ್ಲಾ ಹಿಂದುಳಿದ ವರ್ಗಗಳ (ವರ್ಗ-1, 2ಎ, 2ಬಿ, 3ಎ ಮತ್ತು 3ಬಿ) ಅರ್ಹ ಅಭ್ಯರ್ಥಿಗಳಿಂದ ನಿಗದಿತ ನಮೂನೆಯಲ್ಲಿ ಅರ್ಜಿಯನ್ನು ಆಹ್ವಾನಿಸಲಾಗಿದೆ:

1. ಅಭ್ಯರ್ಥಿಯು ಹಿಂದುಳಿದ ವರ್ಗ (ವರ್ಗ-1, 2ಎ, 2ಬಿ, 3ಎ ಮತ್ತು 3ಬಿ) ಕ್ಕೆ ಸೇರಿದವರಾಗಿದ್ದು, ಕರ್ನಾಟಕ ರಾಜ್ಯದ ನಿವಾಸಿಯಾಗಿರಬೇಕು.
2. ಅಭ್ಯರ್ಥಿಯ ಕುಟುಂಬದ ವಾರ್ಷಿಕ ಆದಾಯವು ರೂ. 15,000 (ರೂಪಾಯಿಗಳು ಹದಿನೈದು ಸಾವಿರ ಮಾತ್ರ)ಕ್ಕೆ ಮೀರಿರಬಾರದು, ಆದರೆ, ಪ್ರವರ್ಗ-1ರ ಅಭ್ಯರ್ಥಿಗಳಿಗೆ ಆದಾಯದ ಮಿತಿ ಇರುವುದಿಲ್ಲ.
3. ಅಭ್ಯರ್ಥಿಯು ಬಾರ್ ಕೌನ್ಸಿಲ್‌ನಲ್ಲಿ ಹೆಸರನ್ನು ನೊಂದಾಯಿಸಿರಬೇಕು.
4. ದಿನಾಂಕ:31.08.2004ಕ್ಕೆ ಅಭ್ಯರ್ಥಿಯ ವಯಸ್ಸು 30 ವರ್ಷದೊಳಗಿರಬೇಕು.
5. ಅಂತಿಮ ಕಾನೂನು ಪದವಿ ಪರೀಕ್ಷೆಯಲ್ಲಿ ಉತ್ತೀರ್ಣರಾಗಿ ಎರಡು ವರ್ಷ ಮೀರಿರಬಾರದು.
6. ಆಯ್ಕೆಯಾದ ಅಭ್ಯರ್ಥಿಯು ತರಬೇತಿಯನ್ನು ಕೆಲವು ಷರತ್ತಿಗೊಳಪಟ್ಟು ಮಧ್ಯದಲ್ಲಿ ಬಿಡುವಂತಿಲ್ಲ. ಈ ಬಗ್ಗೆ ಒಂದು ಮುಚ್ಚಳಿಕೆಯ ಪತ್ರವನ್ನು ನೀಡಬೇಕು.
7. ಈ ಕಾರ್ಯಕ್ರಮದಡಿಯಲ್ಲಿ ಆಯ್ಕೆಯಾದ ಅಭ್ಯರ್ಥಿಗಳಿಗೆ ತರಬೇತಿ ಅವಧಿಯಲ್ಲಿ ಅಭ್ಯರ್ಥಿಯು ಸಲ್ಲಿಸುವ ಹಾಜರಾತಿ/ ದಿನಚರಿಯ ಆಧಾರದ ಮೇಲೆ ಮಾಹೆಯಾನ ರೂ. 1,000 (ರೂಪಾಯಿ ಒಂದು ಸಾವಿರ ಮಾತ್ರ) ತರಬೇತಿ ಭತ್ಯೆಯನ್ನು ಈ ಉದ್ದೇಶಕ್ಕಾಗಿ ಬಿಡುಗಡೆಯಾಗುವ ಅನುದಾನವನ್ನು ಹೊಂದಿಕೊಂಡು ನೀಡಲಾಗುವುದು.

ಆಸಕ್ತ ಅಭ್ಯರ್ಥಿಗಳು ನಿಗದಿತ ನಮೂನೆಯಲ್ಲಿ ಅರ್ಜಿಯನ್ನು ಭರ್ತಿ ಮಾಡಿ, ಜಿಲ್ಲಾ ಅಧಿಕಾರಿ, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖಾ ಜಿಲ್ಲಾ ಅಧಿಕಾರಿಯವರ ಕಛೇರಿ, ದಕ್ಷಿಣ ಕನ್ನಡ ಜಿಲ್ಲಾ ಪಂಚಾಯತ್ ಕಟ್ಟಡ, ಮೊದಲನೇ ಮಹಡಿ, ಕೊಠಡಿ ಸಂಖ್ಯೆ:32, ಕೊಟ್ಟಾರ, ಮಂಗಳೂರು-ಇವರಿಗೆ **ದಿನಾಂಕ: 31.08.2004ರೊಳಗೆ** ತಲುಪುವಂತೆ ಸಲ್ಲಿಸಬೇಕು. ಅರ್ಜಿ ನಮೂನೆ ಹಾಗೂ ಹೆಚ್ಚಿನ ಮಾಹಿತಿಗಾಗಿ ಈ ಮೇಲಿನ ಕಛೇರಿಯನ್ನು ಸಂಪರ್ಕಿಸಬಹುದು.

ಜಿಲ್ಲಾಧಿಕಾರಿ,
ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ
ಇಲಾಖೆ, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

ಪಿ.ಆರ್. 1080

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯದ ನಡವಳಿಗಳು, ಬೆಂಗಳೂರು

**ವಿಷಯ :** ಶ್ರೀಮತಿ ಸಿ.ಎನ್. ಮಂಜುಳ ಶುಶ್ರೂಷಕಿ, ಸಾರ್ವಜನಿಕ ಆಸ್ಪತ್ರೆ, ಶಿಕಾರಿಪುರ, ಶಿವಮೊಗ್ಗ ಜಿಲ್ಲೆ ಇವರ ಅನಧಿಕೃತ ಗೈರುಹಾಜರಿ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ :**
1. ನಿರ್ದೇಶನಾಲಯದ ದೋಷಾರೋಪಣೆ ಹಾಗೂ ತಿಳುವಳಿಕೆಯ ಪತ್ರ ಸಂಖ್ಯೆ: ಡಿಪಿಎನ್(2) ಸಿಆರ್:3:02-03, ದಿನಾಂಕ: 03.10.02.
2. ನೌಕರರ ಲಿಖಿತ ಅಹವಾಲು ಪತ್ರ ಸಲ್ಲಿಸಿಲ್ಲ.
3. ವಿಚಾರಣಾಧಿಕಾರಿಗಳ ನೇಮಕಾತಿ ಆದೇಶ ಸಂಖ್ಯೆ: ಡಿಪಿಎನ್(2) ಸಿಆರ್:3:02-03, ದಿನಾಂಕ: 21.01.03.
4. ವಿಚಾರಣಾ ವರದಿಯ ಸಂಖ್ಯೆ: ವಿಆ: ವಿಚಾರಣೆ:ಎನ್‌ಜಿ:210:02-03, ದಿನಾಂಕ:26.03.04.
5. ವಿಚಾರಣಾ ವರದಿ ನೌಕರರಿಗೆ ಜಾರಿ ಮಾಡಿದ ಸೂಚನಾ ಪತ್ರ ಸಂಖ್ಯೆ: ಡಿಪಿಎನ್ (2) ಸಿಆರ್:3:02-03 ದಿನಾಂಕ: 16.04.04.
6. ನೌಕರರ ಲಿಖಿತ ಅಹವಾಲು ಪತ್ರ ದಿನಾಂಕ: 21.08.03.

**ಪ್ರಸ್ತಾವನೆ:**

ಶ್ರೀಮತಿ ಸಿ.ಎನ್. ಮಂಜುಳ, ಶುಶ್ರೂಷಕಿ, ಇವರು ಸಾರ್ವಜನಿಕ ಆಸ್ಪತ್ರೆ, ಶಿಕಾರಿಪುರ, ಶಿವಮೊಗ್ಗ ಜಿಲ್ಲೆ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ದಿನಾಂಕ:01.09.2000 ರಿಂದ ಇಲ್ಲಿಯವರೆವಿಗೂ ಗೈರು ಹಾಜರಿಯಲ್ಲಿರುವ ಇವರ ಬಗ್ಗೆ ಮೇಲೆ ಓದಲಾದ (1) ರಲ್ಲಿನ ಪತ್ರದಲ್ಲಿ ತಿಳುವಳಿಕೆ ಹಾಗೂ ದೋಷಾರೋಪಣಾ ಪಟ್ಟಿಯನ್ನು ಜಾರಿಗೊಳಿಸಿದ್ದು, ಇದಕ್ಕೆ ಅನುಗುಣವಾಗಿ ನೌಕರರು ಮೇಲೆ ಓದಲಾದ (2) ರಲ್ಲಿನ ಪತ್ರದಲ್ಲಿ ತನ್ನ ಲಿಖಿತ ಅಹವಾಲನ್ನು ಸಲ್ಲಿಸದ ಕಾರಣ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವುದು ಸೂಕ್ತವೆಂದು ನಿರ್ಣಯಿಸಿ ಮೇಲೆ ಓದಲಾದ (3)ರಲ್ಲಿನ ಆದೇಶದಲ್ಲಿ ಮುಖ್ಯ ಜಾಗೃತ ಅಧಿಕಾರಿ, ಜಾಗೃತಕೋಶ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯ, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದ್ದರ ರೀತ್ಯಾ ಮೇಲೆ ಓದಲಾದ (4) ರಲ್ಲಿನ ಆದೇಶದಂತೆ ವಿಚಾರಣೆ ನಡೆಸಿ ವರದಿಯನ್ನು ಸಲ್ಲಿಸಿದ್ದಂತೆ ಮೇಲೆ ಓದಲಾದ (5)ರಲ್ಲಿನ ಸೂಚನಾಪತ್ರದಲ್ಲಿ ವಿಚಾರಣೆ ವರದಿಯ ಪ್ರತಿಯನ್ನು ಜಾರಿಗೊಳಿಸಿರುತ್ತದೆ.

ನೌಕರರು ವಿಚಾರಣಾ ಸಂದರ್ಭದಲ್ಲಿ ಸಲ್ಲಿಸಿರುವ ಲಿಖಿತ ಅಹವಾಲು ಹಾಗೂ ವಿಚಾರಣಾ ಅಧಿಕಾರಿಗಳು ನೀಡಿರುವ ವಿಚಾರಣಾ ವರದಿಯಲ್ಲಿ ನಿರ್ಣಯದ ವರದಿಯನ್ನು ಪರಿಶೀಲಿಸಿದ ತರುವಾಯ ನೌಕರರು ಮೇಲೆ ಓದಲಾದ (6)ರಲ್ಲಿನ ಮನವಿಯಂತೆ, ನೌಕರರು ಖಾಯಂ ಪೂರ್ವ ಸೇವಾವಧಿಯಲ್ಲಿಯೇ ಗೈರುಹಾಜರಿ ಆಗಿರುವುದರಿಂದ, ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ ಸಂಖ್ಯೆ: ಡಿಪಿಎನ್ (2) ಸಿಆರ್:3:02-03, ಬೆಂಗಳೂರು, ದಿನಾಂಕ:20ನೇ ಜುಲೈ, 2004**

1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಡಾ: ಜಿ.ಬಿ. ದೇಸಾಯಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶಕರು, ಆದ ನಾನು ಶ್ರೀಮತಿ ಸಿ.ಎನ್. ಮಂಜುಳ, ಶುಶ್ರೂಷಕಿ, ಸಾರ್ವಜನಿಕ ಆಸ್ಪತ್ರೆ, ಶಿಕಾರಿಪುರ, ಶಿವಮೊಗ್ಗ ಜಿಲ್ಲೆ ಇವರು ಖಾಯಂಪೂರ್ವ ಸೇವಾವಧಿಯಲ್ಲೇ ದಿನಾಂಕ:01.09.2000 ರಿಂದ ಇಲ್ಲಿಯವರೆವಿಗೂ ಅನಧಿಕೃತ ಗೈರುಹಾಜರಿಯಲ್ಲಿರುವುದರಿಂದ, ದಂಡನೆಯಾಗಿ ಸದರಿ ನಿಯಮ 8(vii)ರ ಪ್ರಕಾರ ನೌಕರರನ್ನು ಸೇವೆಯಿಂದ ವಜಾ ಮಾಡಿರುತ್ತೇನೆ.

**ಡಾ: ಜಿ.ಬಿ. ದೇಸಾಯಿ,**
ನಿರ್ದೇಶಕರು,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು.

ಪಿ.ಆರ್. 1081

**ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿಗಳ ಕಛೇರಿ, ಜೋಯಡಾ ತಾಲ್ಲೂಕು, ಉತ್ತರ ಕನ್ನಡ ಜಿಲ್ಲೆ**

**ಅಧಿಸೂಚನೆ**

**ನಂ. ತಾಸಕಅ:ಸಿಬ್ಬಂದಿ:ಸಿಆರ್44:2004-05/50, ದಿನಾಂಕ: 14ನೇ ಜುಲೈ, 2004**

**ವಿಷಯ :** ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2000 ಹಾಗೂ 2002ರ ಅನುಷ್ಠಾನದ ಬಗ್ಗೆ.

**ಉಲ್ಲೇಖ :** ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಆಸುಇ-56:ಯೋಮಸ-2(1) ದಿನಾಂಕ:18.07.2002.

ಕರ್ನಾಟಕ ಮಾಹಿತಿ ಪಡೆಯುವ ಹಕ್ಕು ಅಧಿನಿಯಮ 2000 ಮತ್ತು ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ನಿಯಮಗಳು 2002 ಈಗಾಗಲೇ ಜಾರಿಗೆ ಬಂದಿದ್ದು, ಸದರಿ ಅಧಿನಿಯಮದ ರೀತ್ಯಾ ಎಲ್ಲಾ ಸಾರ್ವಜನಿಕ ಪ್ರಾಧಿಕಾರಿಗಳು (ಕಛೇರಿಗಳು) ಅಧಿನಿಯಮದ ಸೆಕ್ಷನ್ 2(ಎ) ಅಡಿಯಲ್ಲಿ ವ್ಯಾಖ್ಯಾನಿಸಿರುವಂತೆ ಸಕ್ಷಮ ಹಾಗೂ ಮೇಲ್ಮನವಿ ಪ್ರಾಧಿಕಾರಿಗಳನ್ನು ನೇಮಿಸಬೇಕಾಗಿರುತ್ತದೆ. ಅದರಂತೆ ತಾಲ್ಲೂಕು ಮಟ್ಟದ ಹಂತದಲ್ಲಿ ಸಮಾಜಕಲ್ಯಾಣ ಇಲಾಖೆಗೆ ಸಂಬಂಧಿಸಿದಂತೆ ಸಕ್ಷಮ ಹಾಗೂ ಮೇಲ್ಮನವಿ ಪ್ರಾಧಿಕಾರಿಗಳಾಗಿ ಈ ಕೆಳಗಿನಂತೆ ನೇಮಿಸಲಾಗಿದೆ.

| | ಸಕ್ಷಮ ಪ್ರಾಧಿಕಾರ | ಅಪೀಲು ಪ್ರಾಧಿಕಾರ |
|---|---|---|
| ತಾಲ್ಲೂಕು ಮಟ್ಟದಲ್ಲಿ | ಕಛೇರಿ ಅಧೀಕ್ಷಕರು | ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿಗಳು |

ಸರ್ಕಾರದ ಅಧಿನಿಯಮದ ಸೆಕ್ಷನ್ 3(ಬಿ) ಅಡಿಯಲ್ಲಿ ನಿಗದಿ ಪಡಿಸಿದಂತೆ ಈ ಕೆಳಗೆ ತಿಳಿಸಿರುವ 4 ಶೀರ್ಷಿಕೆಗಳಲ್ಲಿ ತಿಳಿಸಿರುವ ವಿವರಗಳನ್ನು ಸಾರ್ವಜನಿಕ ಪ್ರಕಟಣೆಗಾಗಿ ಈ ಕೆಳಗಿನಂತೆ ತಿಳಿಯಪಡಿಸಿದೆ.

1. **ಇಲಾಖೆಯ ಸಂಘಟನೆ ಪ್ರಕಾರ್ಯಗಳು ಮತ್ತು ಕರ್ತವ್ಯಗಳ ವಿವರಗಳು:**

ತಾಲ್ಲೂಕು ಹಂತದಲ್ಲಿ ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿಗಳ ಕಛೇರಿಯು ತಾಲ್ಲೂಕು ಪಂಚಾಯತ್ ವ್ಯಾಪ್ತಿಯಡಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದು, ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿಗಳು ಕಛೇರಿಯ ಮುಖ್ಯಸ್ಥರಾಗಿರುತ್ತಾರೆ. ಇವರಿಗೆ ಸಹಕರಿಸಲು ಸದರಿ ಕಛೇರಿಯಲ್ಲಿ ಈ ಕೆಳಗಿನಂತೆ ಪೂರಕ ಸಿಬ್ಬಂದಿ ವ್ಯವಸ್ಥೆ ಇರುತ್ತದೆ.

| | | |
|---|---|---|
| 1. | ಕಛೇರಿ ಅಧೀಕ್ಷಕರು | 1 ಹುದ್ದೆ |
| 2. | ಪ್ರಥಮ ದರ್ಜೆ ಸಹಾಯಕರು | 1 ಹುದ್ದೆ |
| 3. | ದ್ವಿತೀಯ ದರ್ಜೆ ಸಹಾಯಕರು | 1 ಹುದ್ದೆ |
| 4. | ಬೆರಳಚ್ಚುಗಾರರು | 1 ಹುದ್ದೆ |
| 5. | ಗ್ರೂಪ್- ಡಿ ನೌಕರರು | 1 ಹುದ್ದೆ |

ನಮ್ಮ ಅಧೀನದಡಿಯಲ್ಲಿ ಬರುವ ಎಲ್ಲಾ ಸಂಸ್ಥೆಗಳ ಹೆಸರು ಮತ್ತು ವಿವರಗಳು:

| | | | |
|---|---|---|---|
| 1. | ಮೇಲ್ವಿಚಾರಕರು | 1 ಹುದ್ದೆ | ಬಾಲಕರ ವಸತಿ ನಿಲಯ ರಾಮನಗರ |
| 2. | ಅಡಿಗೆಯವರು | 2 ಹುದ್ದೆ | -ಸದರ- |
| 3. | ಅಡಿಗೆ ಸಹಾಯಕರು | 1 ಹುದ್ದೆ | -ಸದರ- |

ಸಮಾಜ ಕಲ್ಯಾಣ ಇಲಾಖೆಗೆ ಸಂಬಂಧಿಸಿದಂತೆ ತಾಲ್ಲೂಕು ಮಟ್ಟದಲ್ಲಿ ಪ.ಜಾತಿ: ಪ.ವರ್ಗಗಳ ಸರ್ವತೋಮುಖ ಅಭಿವೃದ್ಧಿಗಾಗಿ ಈ ಕೆಳಕಂಡ ಹಲವಾರು ಶೈಕ್ಷಣಿಕ ಮತ್ತು ಆರ್ಥಿಕ ನೆರವಿನ ಯೋಜನೆಗಳನ್ನು ಅನುಷ್ಠಾನಗೊಳಿಸಲಾಗಿದೆ.

1. ಕಾನೂನು ಪದವೀಧರರಿಗೆ ಧನಸಹಾಯ
2. ಕಟ್ಟಡಗಳ ನಿರ್ವಹಣೆ
3. ರಾಜ್ಯ ಮೆಟ್ರಿಕ್ ನಂತರದ ವಿದ್ಯಾರ್ಥಿಗಳಿಗೆ ಶಿಷ್ಯವೇತನ
4. ಎಸ್.ಎಸ್.ಎಲ್.ಸಿ. ತೇರ್ಗಡೆಯಾದ ವಿದ್ಯಾರ್ಥಿಗಳಿಗೆ ಪುರಸ್ಕಾರ ಬಹುಮಾನ
5. ಮೆಟ್ರಿಕ್ ಪೂರ್ವ ವಿದ್ಯಾರ್ಥಿವೇತನ
6. ಪ್ರತಿಭಾ ವಿದ್ಯಾರ್ಥಿವೇತನ
7. ಮೆಟ್ರಿಕ್‌ಪೂರ್ವ ವಿದ್ಯಾರ್ಥಿನಿಲಯಗಳು
8. ಹೆಚ್ಚಿನ ಊಟ ಮತ್ತು ವಸತಿ ವೆಚ್ಚಗಳ ಸಹಾಯ
9. ಪ. ವರ್ಗದ ಮೆಟ್ರಿಕ್‌ನಂತರದ ವಿದ್ಯಾರ್ಥಿವೇತನ (ಸಿ.ಎಸ್.ಎಸ್.)
10. ಅನೈರ್ಮಲ್ಯ ವೃತ್ತಿಗಳಲ್ಲಿ ತೊಡಗಿರುವ ಮಕ್ಕಳಿಗೆ ಮೆಟ್ರಿಕ್ ಪೂರ್ವ ವಿದ್ಯಾರ್ಥಿವೇತನ
11. 1 ರಿಂದ 4ನೇ ತರಗತಿಯ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನ
12. ಅಸ್ಪೃಶ್ಯತಾ ನಿವಾರಣೆ
13. ದೌರ್ಜನ್ಯಕ್ಕೆ ಒಳಪಟ್ಟ ಪ.ಜಾತಿಯವರಿಗೆ ಪರಿಹಾರ
14. ಜಾತಿ ಪರಿಶೀಲನೆ
15. ಅಂಬೇಡ್ಕರ್ ವಸತಿ ಯೋಜನೆ

**ಸೂಚನೆ:** ಮೇಲ್ಕಂಡ ಕಾರ್ಯಕ್ರಮಗಳಲ್ಲಿ ತಾಲ್ಲೂಕು ಮಟ್ಟದ ಇನ್ನಾವುದಾದರೂ ಬೇರೆ ಯೋಜನೆಗಳನ್ನು ಸೇರಿಸಬೇಕಾಗಿದ್ದಲ್ಲಿ ಆ ಬಗ್ಗೆ ಪರಿಶೀಲಿಸಿ ಪ್ರಕಟಿಸುವುದು ಮತ್ತು ಸಂಬಂಧಪಡದೇ ಇರುವ ಯೋಜನೆಗಳನ್ನು ಕೈಬಿಡುವುದು.

**2. ಅಧಿಕಾರಿಗಳು ಮತ್ತು ನೌಕರರ ಅಧಿಕಾರಗಳು ಮತ್ತು ಕರ್ತವ್ಯಗಳು ಹಾಗೂ ತೀರ್ಮಾನ ಕೈಗೊಳ್ಳುವಲ್ಲಿ ಅನುಸರಿಸುವ ಕಾರ್ಯವಿಧಾನ:**

ಮೇಲೆ ವಿವರಿಸಿರುವಂತೆ, ಶೀರ್ಷಿಕೆ (1)ರಲ್ಲಿ ತಿಳಿಸಿರುವ ಅಧಿಕಾರಿ ಮತ್ತು ಸಿಬ್ಬಂದಿ ವರ್ಗದವರು ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳ ಕಛೇರಿಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದು, ಎಲ್ಲಾ ವಿಷಯಗಳ ಬಗ್ಗೆ ಅಂತಿಮ ತೀರ್ಮಾನ ಕೈಗೊಳ್ಳುವ ಅಧಿಕಾರವು ತಾಲ್ಲೂಕು ಮಟ್ಟದಲ್ಲಿ, ಸಂಬಂಧಿಸಿದ ತಾಲ್ಲೂಕು ಪಂಚಾಯತ್‌ನ ಕಾರ್ಯನಿರ್ವಹಣಾ ಅಧಿಕಾರಿಗಳಿಗೆ ಇರುತ್ತದೆ.

**ಅಧಿಕಾರಿಗಳ ಕರ್ತವ್ಯಗಳು:**

**ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳು:** ಇವರು ನಿರ್ವಹಿಸುತ್ತಿರುವ ಪ್ರತಿಯೊಂದು ಕರ್ತವ್ಯಗಳ ಬಗ್ಗೆ ಇಲ್ಲಿ ಅಂಶವಾರು ಮಾಹಿತಿ ನೀಡುವುದು. ಜಾಬ್ ಚಾರ್ಟ್ ಪ್ರತಿ ಲಗತ್ತಿಸಿದೆ.

**ಸೂಚನೆ:** ಜಾಬ್ ಚಾರ್ಟ್‌ನಲ್ಲಿ ನೀಡಿರುವ ಕರ್ತವ್ಯಗಳಲ್ಲದೇ, ಬೇರೆ ಮಾಹಿತಿಗಳಿದ್ದಲ್ಲಿ, ಅವುಗಳನ್ನು ಸೇರಿಸುವುದು ಹಾಗೂ ಸಂಬಂಧಪಡದ ಮಾಹಿತಿಗಳನ್ನು ಕೈಬಿಡುವುದು.

**3. ಕಛೇರಿ ಸಿಬ್ಬಂದಿಯವರ ಕರ್ತವ್ಯ ನಿರ್ವಹಣೆ ವಿವರಗಳು:**

ಕಛೇರಿ ಸಿಬ್ಬಂದಿ ವರ್ಗದವರು ಸಂಬಂಧಿಸಿದ ಅಧಿಕಾರಿಗಳ ವ್ಯಾಪ್ತಿಯಡಿಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದು, ಆಯಾ ಅಧಿಕಾರಿಗಳಿಗೆ ಪೂರಕವಾಗಿ ಸಹಾಯವಾಗುವಂತೆ ಕಾರ್ಯ ನಿರ್ವಹಿಸುವರು. ಸಾರ್ವಜನಿಕರಿಂದ, ಮೇಲಧಿಕಾರಿಗಳ ಕಛೇರಿಯಿಂದ ಹಾಗೂ ಅಧೀನ ಅಧಿಕಾರಿಗಳಿಂದ ಬರುವಂತಹ ಎಲ್ಲಾ ಕಾಗದ ಪತ್ರಗಳನ್ನು ಸಾಮಾನ್ಯ ಸ್ವೀಕೃತಿ ಶಾಖೆಯಲ್ಲಿ ಸ್ವೀಕರಿಸಿ, ಸಂಬಂಧಿಸಿದ ಅಧಿಕಾರಿಗಳ ಹಾಗೂ ಕಛೇರಿ ಅಧೀಕ್ಷಕರ ಕಿರುಸಹಿ ಮಾಡಿಸಿದ ನಂತರ, ಸದರಿ ಪತ್ರಗಳನ್ನು ನೋಂದಾಯಿಸಿ, ಸಂಬಂಧಪಟ್ಟ ವಿಷಯ ನಿರ್ವಾಹಕರಿಗೆ ಸ್ವೀಕೃತಿ ಪಡೆದು ನೀಡಲಾಗುವುದು.

ತುರ್ತು ಟಪಾಲುಗಳ ಬಗ್ಗೆ ಆದ್ಯತೆ ಮೇರೆಗೆ ವಿಷಯ ನಿರ್ವಾಹಕರು ಕಛೇರಿ ಕೈಪಿಡಿಯ ಪ್ರಕಾರ, ಕಡತವನ್ನು ಪ್ರಾರಂಭಿಸಿ, ಅಧಿಕಾರಿಗಳ ಅನುಮೋದನೆಗಾಗಿ ಅಥವಾ ಮಂಜೂರಾತಿಗಾಗಿ ಕ್ರಮ ಕೈಗೊಳ್ಳುವರು.

**4. ಇಲಾಖೆಯು ತನ್ನ ಪ್ರಕಾರ್ಯಗಳನ್ನು ನಿರ್ವಹಿಸುವಲ್ಲಿ ರೂಪಿಸಿರುವ ಗುಣಮಟ್ಟಗಳು:**

1. ಕಛೇರಿಯಲ್ಲಿ ಸ್ವೀಕರಿಸಲಾಗುವ ಎಲ್ಲಾ ಕಾಗದ ಪತ್ರಗಳನ್ನು ಸಾಮಾನ್ಯ ಸ್ವೀಕೃತಿ ಶಾಖೆಯಲ್ಲಿ ನೋಂದಾಯಿಸಿ, ಆ ದಿನವೇ ವಿಷಯ ನಿರ್ವಾಹಕರಿಗೆ ನೀಡುವಂತಹ ವ್ಯವಸ್ಥೆ ಹಾಗೂ ನಿಗದಿತ ಅವಧಿಯೊಳಗೆ ಇತ್ಯರ್ಥಪಡಿಸುವುದು.
2. ಕಾರ್ಯಕ್ರಮಗಳ ಪ್ರಗತಿ ಪರಿಶೀಲನೆ ಮಾಡಲು ಮಾಸಿಕ ಸಭೆಗಳನ್ನು ಏರ್ಪಡಿಸುವುದು.
3. ಆಗಿಂದಾಗ್ಗೆ ಅಧಿಕಾರಿಗಳಿಂದ ಹಾಗೂ ಕಛೇರಿ ಅಧೀಕ್ಷಕರಿಂದ ವಿಷಯ ನಿರ್ವಾಹಕರ ಮೇಜು ತಪಾಸಣೆ ಕಾರ್ಯ.
4. ಇಲಾಖಾ ಸಂಸ್ಥೆಗಳ ಸಿಬ್ಬಂದಿ ವರ್ಗದವರಿಗೆ ಕಾರ್ಯಾಗಾರ ನಡೆಸುವುದು.
5. ಸರ್ಕಾರವು/ ಮೇಲಧಿಕಾರಿಗಳು ನೀಡುವ ಆದೇಶಗಳನ್ನು ಹಾಗೂ ಸುತ್ತೋಲೆಗಳನ್ನು ತ್ವರಿತಗತಿಯಲ್ಲಿ ಪಾಲಿಸುವುದು.
6. ಸಾರ್ವಜನಿಕ ಕುಂದುಕೊರತೆಗಳ ನಿವಾರಣೆಯ ಬಗ್ಗೆ ಸಾರ್ವಜನಿಕರಿಗೆ ಸೂಕ್ತ ಮಾಹಿತಿ ನೀಡುವುದು.

**5. ಮಾಹಿತಿಯನ್ನು ಪಡೆಯುವುದಕ್ಕಾಗಿ ನಾಗರೀಕರಿಗೆ ಕೊಡಬಹುದಾದ ಅನುಕೂಲತೆಯ ವಿವರಗಳು:**

1. ಇಲಾಖೆಯ ಕಾರ್ಯಕ್ರಮ ಹಾಗೂ ಯೋಜನೆಗಳಿಗೆ ಸಂಬಂಧಿಸಿದ ಮಾಹಿತಿಗಳು, ಆದೇಶಗಳು, ವಾರ್ಷಿಕ ಸಂಕಲನ ಕ್ರಿಯಾಯೋಜನೆ ಹಾಗೂ ಕಿರುಹೊತ್ತಿಗೆಗಳನ್ನು ಸಾರ್ವಜನಿಕರ ಪ್ರಕಟಣೆಗಾಗಿ ನೀಡುವುದು.
2. ಸಾರ್ವಜನಿಕ ಕುಂದುಕೊರತೆಗಳಿಗೆ ಸಂಬಂಧಿಸಿದಂತೆ, ಪ್ರತ್ಯೇಕ ಸಂಪರ್ಕಾಧಿಕಾರಿಗಳನ್ನು ನೇಮಿಸುವುದು.
3. ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2000 ರೀತ್ಯಾ ರಾಜ್ಯ ಮಟ್ಟದಲ್ಲಿ, ಜಂಟಿ ನಿರ್ದೇಶಕರು (ವಿ.ಘ.ಯೋ.) ಯವರನ್ನು ಸಕ್ಷಮ ಪ್ರಾಧಿಕಾರವಾಗಿ ಹಾಗೂ ಸಮಾಜ ಕಲ್ಯಾಣ ಆಯುಕ್ತರವರನ್ನು ಮೇಲ್ಮನವಿ ಪ್ರಾಧಿಕಾರವನ್ನಾಗಿ, ಹಾಗೂ ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳನ್ನು ಸಕ್ಷಮ ಪ್ರಾಧಿಕಾರಿಯನ್ನಾಗಿಯೂ, ಅದೇ ರೀತಿ ತಾಲ್ಲೂಕು ಮಟ್ಟದಲ್ಲಿ ಕಛೇರಿ ಅಧೀಕ್ಷಕರನ್ನು ಸಕ್ಷಮ ಪ್ರಾಧಿಕಾರಿಯಾಗಿ ಹಾಗೂ ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳನ್ನು ಮೇಲ್ಮನವಿ ಪ್ರಾಧಿಕಾರಿಯನ್ನಾಗಿ ನೇಮಿಸಲಾಗಿದೆ.
4. ಇಲಾಖೆಯಲ್ಲಿ ಮಂಜೂರಾತಿಗಾಗಿ ನೀಡಲಾಗಿರುವ ಕಾಲಾವಧಿ ನಿಗದಿ ವಿಚಾರಗಳನ್ನು ಸಾರ್ವಜನಿಕರಿಗೆ ತಿಳಿಸುವಂಥಹ ಕಾರ್ಯಪಟ್ಟಿ ಮಾಡಿ ಪ್ರಕಟಿಸಿದೆ.

ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳು,
ಪಿ.ಆರ್.1082 ಜೋಯಿಡಾ ತಾಲ್ಲೂಕು, ಉತ್ತರ ಕನ್ನಡ ಜಿಲ್ಲೆ.

**ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳ ಕಛೇರಿ, ಬಳ್ಳಾರಿ ಜಿಲ್ಲೆ, ಬಳ್ಳಾರಿ**

**ಅಧಿಸೂಚನೆ**

**ಸಂಖ್ಯೆ:ಜಿಸಕ/ ಸಿಬ್ಬಂದಿ/ಎಸ್5/ಸಿಆರ್1/2004-05, ದಿನಾಂಕ: 1ನೇ ಜೂನ್, 2004**

**ವಿಷಯ :** ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2000 ಹಾಗೂ 2002ರ ಅನುಷ್ಠಾನದ ಬಗ್ಗೆ.

**ಉಲ್ಲೇಖ :** ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಆಸುಇ-56 ಯೋಮಸ-02 (1), ದಿನಾಂಕ: 18.07.2002.

ಕರ್ನಾಟಕ ಮಾಹಿತಿ ಪಡೆಯುವ ಹಕ್ಕು ಅಧಿನಿಯಮ, 2000 ಮತ್ತು ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ನಿಯಮಗಳು 2002 ಈಗಾಗಲೇ ಜಾರಿಗೆ ಬಂದಿದ್ದು, ಸದರಿ ಅಧಿನಿಯಮದ ರೀತ್ಯಾ, ಎಲ್ಲಾ ಸಾರ್ವಜನಿಕ ಪ್ರಾಧಿಕಾರಗಳು (ಕಛೇರಿಗಳು) ಅಧಿನಿಯಮದ ಸೆಕ್ಷನ್ 2 (ಎ) ಅಡಿಯಲ್ಲಿ ವ್ಯಾಖ್ಯಾನಿಸಿರುವಂತೆ, ಸಕ್ಷಮ ಹಾಗೂ ಮೇಲ್ಮನವಿ ಪ್ರಾಧಿಕಾರಗಳನ್ನು ನೇಮಿಸಬೇಕಾಗಿರುತ್ತದೆ. ಅದರಂತೆ ಜಿಲ್ಲಾ ಮಟ್ಟದ ಹಂತದಲ್ಲಿ ಸಮಾಜ ಕಲ್ಯಾಣ ಇಲಾಖೆಗೆ ಸಂಬಂಧಿಸಿದಂತೆ ಸಕ್ಷಮ ಹಾಗೂ ಮೇಲ್ಮನವಿ ಪ್ರಾಧಿಕಾರಿಗಳಾಗಿ ಈ ಕೆಳಗಿನಂತೆ ನೇಮಿಸಲಾಗಿದೆ.

| ಜಿಲ್ಲಾ ಮಟ್ಟದಲ್ಲಿ | ಸಕ್ಷಮ ಪ್ರಾಧಿಕಾರ | ಅಪೀಲು ಪ್ರಾಧಿಕಾರ |
|---|---|---|
| | ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳು | ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್. |

ಸರ್ಕಾರದ ಅಧಿನಿಯಮದ ಸೆಕ್ಷನ್ 3 (ಬಿ) ಅಡಿಯಲ್ಲಿ ನಿಗದಿಪಡಿಸಿದಂತೆ, ಈ ಕೆಳಗೆ ತಿಳಿಸಿರುವ 4 ಶೀರ್ಷಿಕೆಗಳಲ್ಲಿ ತಿಳಿಸಿರುವ ವಿವರಗಳನ್ನು ಸಾರ್ವಜನಿಕ ಪ್ರಕಟಣೆಗಾಗಿ ಈ ಕೆಳಗಿನಂತೆ ತಿಳಿಯಪಡಿಸಿದೆ.

**1. ಇಲಾಖೆಯ ಸಂಘಟನೆ, ಪ್ರಕಾರ್ಯಗಳು ಮತ್ತು ಕರ್ತವ್ಯಗಳ ವಿವರಗಳು:**

ಜಿಲ್ಲಾ ಹಂತದಲ್ಲಿ ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳ ಕಛೇರಿಯು ಜಿಲ್ಲಾ ಪಂಚಾಯತ್‌ನ ವ್ಯಾಪ್ತಿಯಡಿಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದು, ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳು ಕಛೇರಿಯ ಮುಖ್ಯಸ್ಥರಾಗಿರುತ್ತಾರೆ. ಇವರಿಗೆ ಸಹಕರಿಸಲು ಸದರಿ ಕಛೇರಿಯಲ್ಲಿ ಈ ಕೆಳಗಿನಂತೆ ಸಿಬ್ಬಂದಿ ವ್ಯವಸ್ಥೆ ಇರುತ್ತದೆ.

1. ಕಛೇರಿ ಅಧೀಕ್ಷಕರು - 1 ಹುದ್ದೆ
2. ವಿಶೇಷ ಘಟಕ ಯೋಜನೆ ಅಧೀಕ್ಷಕರು - 1 ಹುದ್ದೆ
3. ತನಿಖಾ ಸಹಾಯಕರು - 1 ಹುದ್ದೆ
4. ಪ್ರಥಮ ದರ್ಜೆ ಸಹಾಯಕರು - 4 ಹುದ್ದೆಗಳು
5. ದ್ವಿತೀಯ ದರ್ಜೆ ಸಹಾಯಕರು - 1 ಹುದ್ದೆ
6. ಬೆರಳಚ್ಚುಗಾರರು ಹಾಗೂ ಗುಮಾಸ್ತರು - 1 ಹುದ್ದೆ

7. ವಾಹನ ಚಾಲಕರು - 1 ಹುದ್ದೆ

8. ಜವಾನರು - 2 ಹುದ್ದೆಗಳು

2) ಇಲಾಖೆಯ ಅಧೀನದಡಿಯಲ್ಲಿ ಬರುವ ಎಲ್ಲಾ ಸಂಸ್ಥೆಗಳ ಹೆಸರು ಮತ್ತು ವಿವರಗಳು.

| ಕ್ರ. ಸಂ. | ಸಂಸ್ಥೆಯ ಹೆಸರು | ಸಂಖ್ಯೆ | ಸ್ಥಳದ ಹೆಸರು |
|---|---|---|---|
| 1. | ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳ ಕಛೇರಿ | 07 | 1) ಬಳ್ಳಾರಿ (2) ಹಡಗಲಿ (3) ಹ.ಬೊ.ಹಳ್ಳಿ (4) ಹೊಸಪೇಟೆ (5) ಕೂಡ್ಲಿಗಿ (6) ಸಿರುಗುಪ್ಪ (7) ಸಂಡೂರು |
| 2. | ಪರಿಶಿಷ್ಟ ಜಾತಿ ಮೆಟ್ರಿಕ್ ಪೂರ್ವ ಬಾಲಕರ/ ಬಾಲಕಿಯರ ವಿದ್ಯಾರ್ಥಿ ನಿಲಯಗಳು<br>ಬಾಲಕರ ವಿದ್ಯಾರ್ಥಿ ನಿಲಯಗಳು<br>ಬಾಲಕಿಯರ ವಿದ್ಯಾರ್ಥಿ ನಿಲಯಗಳು<br>ಒಟ್ಟು | <br><br>36<br>12<br>48 | **ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿನಿಲಯಗಳು**<br>**1. ಬಳ್ಳಾರಿ ತಾಲ್ಲೂಕು:**<br>(1)ಬಳ್ಳಾರಿ (2) ಕುಡಿತಿನಿ (3) ಮೋಕ (4) ಎಮ್ಮಿಗನೂರು (5) ಕುರುಗೋಡು<br>**2. ಸಿರುಗುಪ್ಪ ತಾಲ್ಲೂಕು:**<br>(6) ಸಿರುಗುಪ್ಪ (7) ತೆಕ್ಕಲಕೋಟೆ (8) ಸಿರಿಗೇರಿ (9) ರಾರಾವಿ<br>**3. ಸಂಡೂರು ತಾಲ್ಲೂಕು:**<br>(10) ಸಂಡೂರು (11) ತೋರಣಗಲ್ಲು (12) ಬಂಡ್ರಿ (13) ಸೋವೇನಹಳ್ಳಿ<br>**4. ಹೊಸಪೇಟೆ ತಾಲ್ಲೂಕು:**<br>(14) ಹೊಸಪೇಟೆ (15) ಎಂ.ಎಂ.ಹಳ್ಳಿ (16) ಕಂಪ್ಲಿ (17) ರಾಮಸಾಗರ (18) ಕಮಲಾಪುರ<br>**5. ಕೂಡ್ಲಿಗಿ ತಾಲ್ಲೂಕು:**<br>(19) ಕೂಡ್ಲಿಗಿ (20) ಕೊಟ್ಟೂರು (21) ಗುಡೇಕೋಟೆ (22)ಉಜ್ಜನಿ<br>**6. ಹೂವಿನ ಹಡಗಲಿ ತಾಲ್ಲೂಕು:**<br>(23) ಹಡಗಲಿ (24) ಸೋಗಿ (25) ಅಡವಿಮಲ್ಲನಕೇರಿ (26) ಇಟಗಿ (27) ಸೋವೇನಹಳ್ಳಿ (28) ಮಾನ್ಯರಮಸಲವಾಡ (29) ಉತ್ತಂಗಿ (30) ಕುಮಾರನಹಳ್ಳಿ ತಾಂಡ<br>**7. ಹಗರಿಬೊಮ್ಮನಹಳ್ಳಿ ತಾಲ್ಲೂಕು:**<br>(31) ಹ.ಬೊ.ಹಳ್ಳಿ (32) ಕೋಗಳಿ (33) ಮೋರಿಗೇರಿ (34) ತಂಬ್ರಳ್ಳಿ (35) ಹಂಪಸಾಗರ (36) ಮಾಲ್ವಿ |
| | | | **ಮೆಟ್ರಿಕ್ ಪೂರ್ವ ಬಾಲಕಿಯರ ವಿದ್ಯಾರ್ಥಿ ನಿಲಯಗಳು:**<br>**1. ಬಳ್ಳಾರಿ ತಾಲ್ಲೂಕು:**<br>1. ಬಳ್ಳಾರಿ<br>**2. ಸಿರುಗುಪ್ಪ ತಾಲ್ಲೂಕು:**<br>(2) ಸಿರುಗುಪ್ಪ<br>**3. ಸಂಡೂರು ತಾಲ್ಲೂಕು:**<br>(3) ಸಂಡೂರು<br>**4. ಹೊಸಪೇಟೆ ತಾಲ್ಲೂಕು:**<br>(4) ಹೊಸಪೇಟೆ (5) ಕಂಪ್ಲಿ (6) ಕಮಲಾಪುರ<br>**5. ಕೂಡ್ಲಿಗಿ ತಾಲ್ಲೂಕು:**<br>(7) ಕೂಡ್ಲಿಗಿ (8) ಕೊಟ್ಟೂರು (9) ಉಜ್ಜನಿ<br>**6. ಹೂವಿನ ಹಡಗಲಿ ತಾಲ್ಲೂಕು:**<br>(10) ಹಡಗಲಿ (11) ಹಿರೇ ಹಡಗಲಿ<br>**7. ಹಗರಿಬೊಮ್ಮನಹಳ್ಳಿ ತಾಲ್ಲೂಕು:**<br>(12) ಹ.ಬೊ.ಹಳ್ಳಿ |

| ಕ್ರ. ಸಂ. | ಸಂಸ್ಥೆಯ ಹೆಸರು | ಸಂಖ್ಯೆ | ಸ್ಥಳದ ಹೆಸರು |
|---|---|---|---|
| 3. | ಪ.ವರ್ಗದ ಮೆಟ್ರಿಕ್ ಪೂರ್ವ ಬಾಲಕರ/ ಬಾಲಕಿಯರ ವಿದ್ಯಾರ್ಥಿ ನಿಲಯಗಳು<br>ಬಾಲಕರ ವಿದ್ಯಾರ್ಥಿ ನಿಲಯಗಳು<br>ಬಾಲಕಿಯರ ವಿದ್ಯಾರ್ಥಿ ನಿಲಯಗಳು<br>**ಒಟ್ಟು** | <br><br>4<br>1<br>**5** | **ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿ ನಿಲಯಗಳು:**<br>**1. ಸಂಡೂರು ತಾಲ್ಲೂಕು:**<br>(1) ಸಂಡೂರು<br>**2. ಕೂಡ್ಲಿಗಿ ತಾಲ್ಲೂಕು:**<br>(2) ಚಿರತಗುಂಡು (3) ಸೂಲದರ ಹಳ್ಳಿ<br>**3. ಹೂವಿನ ಹಡಗಲಿ ತಾಲ್ಲೂಕು:**<br>(4) ಕಾಲ್ವಿ<br>**2. ಮೆಟ್ರಿಕ್ ಪೂರ್ವ ಬಾಲಕಿಯರ ವಿದ್ಯಾರ್ಥಿ ನಿಲಯಗಳು:**<br>**1. ಹಗರಿಬೊಮ್ಮನಹಳ್ಳಿ ತಾಲ್ಲೂಕು:**<br>(1) ಹ.ಬೊ.ಹಳ್ಳಿ |
| 4. | ಪರಿಶಿಷ್ಟ ಜಾತಿ ಮೆಟ್ರಿಕ್ ನಂತರದ ಬಾಲಕರ/ ಬಾಲಕಿಯರ ವಿದ್ಯಾರ್ಥಿ ನಿಲಯಗಳು<br>ಬಾಲಕರ ವಿದ್ಯಾರ್ಥಿ ನಿಲಯಗಳು<br>ಬಾಲಕಿಯರ ವಿದ್ಯಾರ್ಥಿ ನಿಲಯಗಳು<br>**ಒಟ್ಟು** | <br><br>8<br>2<br>**10** | **ಮೆಟ್ರಿಕ್ ನಂತರದ ಬಾಲಕರ ವಿದ್ಯಾರ್ಥಿ ನಿಲಯಗಳು**<br>**1. ಬಳ್ಳಾರಿ ತಾಲ್ಲೂಕು**<br>(1) ಬಳ್ಳಾರಿ ನಗರ ನಂ.1 (2) ಬಳ್ಳಾರಿ ನಗರ ನಂ.2<br>**2. ಸಿರುಗುಪ್ಪ ತಾಲ್ಲೂಕು**<br>(3) ಸಿರುಗುಪ್ಪ<br>**3. ಸಂಡೂರು ತಾಲ್ಲೂಕು**<br>4) ಸಂಡೂರು<br>**4. ಹೊಸಪೇಟೆ ತಾಲ್ಲೂಕು**<br>(5) ಹೊಸಪೇಟೆ (6) ಹಂಪಿ<br>**5. ಹೂವಿನ ಹಡಗಲಿ ತಾಲ್ಲೂಕು**<br>(7) ಹಡಗಲಿ<br>**6. ಹಗರಿ ಬೊಮ್ಮನಹಳ್ಳಿ ತಾಲ್ಲೂಕು**<br>(8) ಹ.ಬೊ.ಹಳ್ಳಿ<br>**ಮೆಟ್ರಿಕ್ ನಂತರದ ಬಾಲಕಿಯರ ವಿದ್ಯಾರ್ಥಿನಿಲಯಗಳು**<br>**1. ಬಳ್ಳಾರಿ ತಾಲ್ಲೂಕು**<br>(1) ಬಳ್ಳಾರಿ ನಗರ<br>**2. ಹೊಸಪೇಟೆ ತಾಲ್ಲೂಕು**<br>(2) ಹೊಸಪೇಟೆ ನಗರ |
| 5. | ಪ. ವರ್ಗದ ಮೆಟ್ರಿಕ್ ನಂತರದ ಬಾಲಕರ/ ಬಾಲಕಿಯರ ವಿದ್ಯಾರ್ಥಿ ನಿಲಯಗಳು<br>ಬಾಲಕರ ವಿದ್ಯಾರ್ಥಿನಿಲಯಗಳು<br>ಬಾಲಕಿರಯ ವಿದ್ಯಾರ್ಥಿ ನಿಲಯಗಳು<br>**ಒಟ್ಟು** | <br><br>2<br>2<br>**4** | **ಮೆಟ್ರಿಕ್ ನಂತರದ ಬಾಲಕರ ವಿದ್ಯಾರ್ಥಿ ನಿಲಯಗಳು**<br>**1. ಬಳ್ಳಾರಿ ತಾಲ್ಲೂಕು**<br>(1) ತಾಂತ್ರಿಕ ಹಾಗೂ ವೈದ್ಯಕೀಯ ಕಾಲೇಜು, ಬಳ್ಳಾರಿ (ಪ.ವರ್ಗ)<br>(2) ಮೆ: ನಂ. ಬಾಲಕರ ವಿದ್ಯಾರ್ಥಿನಿಲಯ, ಬಳ್ಳಾರಿ (ಪ.ವರ್ಗ)<br>**ಮೆಟ್ರಿಕ್ ನಂತರದ ಬಾಲಕಿಯರ ವಿದ್ಯಾರ್ಥಿನಿಲಯಗಳು**<br>**1. ಬಳ್ಳಾರಿ ತಾಲ್ಲೂಕು**<br>(1) ಬಳ್ಳಾರಿ ನಗರ (ಮಂಜೂರಾಗಿದ್ದು, ಪ್ರಾರಂಭ ಹಂತದಲ್ಲಿದೆ)<br>**2. ಹೊಸಪೇಟೆ ತಾಲ್ಲೂಕು**<br>(2) ಹೊಸಪೇಟೆ ನಗರ |
| 6. | ಅನುದಾನಿತ ಮೆಟ್ರಿಕ್ ನಂತರದ ಬಾಲಕರ ವಿದ್ಯಾರ್ಥಿನಿಲಯಗಳು | 4 | **1. ಕೂಡ್ಲಿಗಿ ತಾಲ್ಲೂಕು**<br>(1) ಕೂಡ್ಲಿಗಿ (2) ಕೊಟ್ಟೂರು, (3) ಕಾನಾಮಡಗು (ಪ.ವರ್ಗ)<br>**2. ಹೊಸಪೇಟೆ ತಾಲ್ಲೂಕು**<br>(4) ಹೊಸಪೇಟೆ (ಪ.ಜಾತಿ) |

| ಕ್ರ. ಸಂ. | ಸಂಸ್ಥೆಯ ಹೆಸರು | ಸಂಖ್ಯೆ | ಸ್ಥಳದ ಹೆಸರು |
|---|---|---|---|
| 7. | ಅನುದಾನಿತ ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿನಿಲಯಗಳು | 5 | **1. ಬಳ್ಳಾರಿ ತಾಲ್ಲೂಕು**<br>(1) ಬಳ್ಳಾರಿ (2) ಅಲ್ಲೀಪುರ<br>**2. ಹಡಗಲಿ ತಾಲ್ಲೂಕು**<br>(3) ಕುಮಾರನಹಳ್ಳಿ ತಾಂಡ<br>**3. ಹ.ಬೊ.ಹಳ್ಳಿ ತಾಲ್ಲೂಕು**<br>(4) ಹಂಪಾಪಟ್ಟಣ<br>**4. ಸಂಡೂರು ತಾಲ್ಲೂಕು**<br>(5) ವಿಠಲಾಪುರ |
| 8. | ಪ.ಜಾತಿ ಮಹಿಳಾ ಮತ್ತು ಕಲ್ಯಾಣ ಕೇಂದ್ರಗಳು | 17 | **1. ಬಳ್ಳಾರಿ ತಾಲ್ಲೂಕು**<br>**ಬಳ್ಳಾರಿ ನಗರದಲ್ಲಿ-4**<br>(1) ಶ್ರೀರಾಂಪುರ ಕಾಲೋನಿ (2) ಬಿ.ಪಿ. ಕಾಲೋನಿ<br>(3) ಚೆಲುವಾದಿ ಕೇರಿ (4) ಬೆಳಗಲ್<br>**2. ಸಿರುಗುಪ್ಪ ತಾಲ್ಲೂಕು**<br>**ಸಿರುಗುಪ್ಪ ಪಟ್ಟಣದಲ್ಲಿ-2**<br>(5) 6ನೇ ವಾರ್ಡ್, ಸಿರುಗುಪ್ಪ (5) 8ನೇ ವಾರ್ಡ್ ಸಿರುಗುಪ್ಪ<br>**3. ಸಂಡೂರು ತಾಲ್ಲೂಕು-3**<br>(6) ಸಂಡೂರು (7) ತೋರಣಗಲ್ಲು (8) ಸುಶಿಲಾನಗರ<br>**4. ಹೊಸಪೇಟೆ ತಾಲ್ಲೂಕು**<br>(9) ಹೊಸಪೇಟೆ (10) ಕಂಪ್ಲಿ (11) ಕಮಲಾಪುರ<br>**5. ಕೂಡ್ಲಿಗಿ ತಾಲ್ಲೂಕು-4**<br>12. ಕೂಡ್ಲಿಗಿ (13) ಕೊಟ್ಟೂರು (14) ಚಿಕ್ಕಜೋಗಿಹಳ್ಳಿ<br>(15) ಮಲ್ಲನಾಯಕನ ಹಳ್ಳಿ<br>**6. ಹೂವಿನ ಹಡಗಲಿ ತಾಲ್ಲೂಕು**<br>(16) ಇಟಗಿ (17) ದಾಸರಹಳ್ಳಿ ತಾಂಡ |
| 9. | ಆಶ್ರಮ ಶಾಲೆಗಳು (ಪ.ವರ್ಗ) | 3 | **1. ಸಿರುಗುಪ್ಪ ತಾಲ್ಲೂಕು**<br>(1) ತೆಕ್ಕಲಕೋಟೆ<br>**2. ಸಂಡೂರು ತಾಲ್ಲೂಕು**<br>(2) ಯಶವಂತನಗರ<br>**3. ಹೂವಿನ ಹಡಗಲಿ ತಾಲ್ಲೂಕು**<br>(3) ನಂದಿಹಳ್ಳಿ |
| 10. | ಸರ್ಕಾರಿ ವಸತಿ ಶಾಲೆಗಳು | 2 | **1. ಬಳ್ಳಾರಿ ತಾಲ್ಲೂಕು**<br>1. ಬಳ್ಳಾರಿ<br>**2. ಕೂಡ್ಲಿಗಿ ತಾಲ್ಲೂಕು**<br>2. ಕೂಡ್ಲಿಗಿ |
| 11. | ಹೊಲಿಗೆ ತರಬೇತಿ ಕೇಂದ್ರಗಳು | 2 | **1. ಬಳ್ಳಾರಿ ತಾಲ್ಲೂಕು**<br>(1) ಬಳ್ಳಾರಿ<br>**2. ಹೊಸಪೇಟೆ ತಾಲ್ಲೂಕು**<br>(2) ಹೊಸಪೇಟೆ |
| 12. | ಮುರಾರ್ಜಿ ದೇಸಾಯಿ ಮಾದರಿ ವಸತಿ ಶಾಲೆಗಳು | 3 | **1. ಹೊಸಪೇಟೆ ತಾಲ್ಲೂಕು**<br>1. ತಿಮ್ಮಲಾಪುರ (2) ರಾಮಸಾಗರ (ಕಂಪ್ಲಿ)<br>**2. ಹ.ಬೊ.ಹಳ್ಳಿ ತಾಲ್ಲೂಕು**<br>(3) ವಲ್ಲಭಾಪುರ |

ಸಮಾಜ ಕಲ್ಯಾಣ ಇಲಾಖೆಗೆ ಸಂಬಂಧಪಟ್ಟ ಜಿಲ್ಲಾ ಹಾಗೂ ತಾಲ್ಲೂಕು ವಲಯ ಕಾರ್ಯಕ್ರಮದಡಿ ಪ.ಜಾತಿ/ ಪ.ವರ್ಗಗಳ ಸರ್ವತೋಮುಖ ಅಭಿವೃದ್ಧಿಗಾಗಿ ಈ ಕೆಳಕಂಡ ಹಲವಾರು ಶೈಕ್ಷಣಿಕ ಮತ್ತು ಆರ್ಥಿಕ ನೆರವಿನ ಯೋಜನೆಗಳನ್ನು ಅನುಷ್ಠಾನಗೊಳಿಸಲಾಗುತ್ತಿದೆ.

1. ವಸತಿ ಶಾಲೆಗಳು ಮತ್ತು ಆಶ್ರಮ ಶಾಲೆಗಳು
2. ಅನುದಾನಿತ ವಿದ್ಯಾರ್ಥಿ ನಿಲಯಗಳಿಗೆ ಧನ ಸಹಾಯ
3. ಮುರಾರ್ಜಿ ದೇಸಾಯಿ ವಸತಿ ಶಾಲೆಗಳು
4. ಭಾರತ ಸರ್ಕಾರದ ಮೆಟ್ರಿಕ್ ನಂತರದ ವಿದ್ಯಾರ್ಥಿ ವೇತನ
5. ಪುಸ್ತಕ ಭಂಡಾರ
6. 1 ರಿಂದ 4ನೇ ತರಗತಿವರೆಗೆ ವಿದ್ಯಾರ್ಥಿ ವೇತನ ಹಾಗೂ ಮೆ. ಪೂ. ವಿ.ವೇತನ.
7. ಮಹಿಳೆಯರಿಗೆ ಹೊಲಿಗೆ ತರಬೇತಿ ಕೇಂದ್ರಗಳು
8. ಕಾಲೇಜು ವಿದ್ಯಾರ್ಥಿಗಳಿಗೆ ಬಹುಮಾನ ಹಣ ವಿತರಣೆ
9. ಕಾನೂನು ಪದವೀಧರರಿಗೆ ಶಿಷ್ಯವೇತನ
10. ಎಸ್.ಎಸ್.ಎಲ್.ಸಿ. ಬಹುಮಾನ ಹಣ ವಿತರಣೆ
11. ವಿಶೇಷ ಘಟಕ ಯೋಜನೆಗೆ ವಿಶೇಷ ಕೇಂದ್ರೀಯ ನೆರವು
12. ಅಂಬೇಡ್ಕರ್ ವಸತಿ ಯೋಜನೆ
13. ಆಶ್ರಯ ವಸತಿ ಯೋಜನೆ

**2. ಅಧಿಕಾರಿಗಳು ಮತ್ತು ನೌಕರರ ಅಧಿಕಾರಗಳು ಮತ್ತು ಕರ್ತವ್ಯಗಳು ಹಾಗೂ ತೀರ್ಮಾನ ಕೈಗೊಳ್ಳುವಲ್ಲಿ ಅನುಸರಿಸುವ ಕಾರ್ಯವಿಧಾನ:**

ಮೇಲೆ ವಿವರಿಸಿರುವಂತೆ, ಶೀರ್ಷಿಕೆ (1)ರಲ್ಲಿ ತಿಳಿಸಿರುವ ಅಧಿಕಾರಿ ಮತ್ತು ಸಿಬ್ಬಂದಿ ವರ್ಗದವರು ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳ ಕಛೇರಿಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದು, ಜಿಲ್ಲಾ ಮಟ್ಟದಲ್ಲಿ ಎಲ್ಲಾ ವಿಭಾಗಗಳ ವಿಷಯಗಳ ಬಗ್ಗೆ ಅಂತಿಮ ತೀರ್ಮಾನ ಕೈಗೊಳ್ಳುವ ಅಧಿಕಾರವು ಜಿಲ್ಲಾ ವಲಯದಲ್ಲಿ, ಸಂಬಂಧಿಸಿದ ಜಿಲ್ಲಾ ಪಂಚಾಯತ್‌ನ ಮುಖ್ಯ ಕಾರ್ಯನಿರ್ವಹಣಾ ಅಧಿಕಾರಿಗಳಿಗೆ ಇರುತ್ತದೆ.

**ಅಧಿಕಾರಿಗಳ ಕರ್ತವ್ಯಗಳು:**

**ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳು:** ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳು ನಿರ್ವಹಿಸುವ ಪ್ರತಿಯೊಂದು ಕರ್ತವ್ಯಗಳ ಬಗ್ಗೆ ಇಲ್ಲಿ ಅಂಶವಾರು ಮಾಹಿತಿ ನೀಡುವುದು. ಜಾಬ್ ಚಾರ್ಟ್ ಪ್ರತಿ ಲಗತ್ತಿಸಿದೆ.

**3. ಕಛೇರಿ ಸಿಬ್ಬಂದಿಯವರ ಕರ್ತವ್ಯ ನಿರ್ವಹಣೆ ವಿವರಗಳು:**

ಕಛೇರಿ ಸಿಬ್ಬಂದಿ ವರ್ಗದವರು ಸಂಬಂಧಿಸಿದ ಅಧಿಕಾರಿಗಳ ವ್ಯಾಪ್ತಿಯಡಿಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದು, ಆಯಾ ಅಧಿಕಾರಿಗಳಿಗೆ ಪೂರಕವಾಗಿ ಸಹಾಯವಾಗುವಂತೆ ಕಾರ್ಯ ನಿರ್ವಹಿಸುವರು. ಸಾರ್ವಜನಿಕರಿಂದ, ಮೇಲಧಿಕಾರಿಗಳ ಕಛೇರಿಯಿಂದ ಹಾಗೂ ಅಧೀನ ಅಧಿಕಾರಿಗಳಿಂದ ಬರುವಂತಹ ಎಲ್ಲಾ ಕಾಗದ ಪತ್ರಗಳನ್ನು ಸಾಮಾನ್ಯ ಸ್ವೀಕೃತಿ ಶಾಖೆಯಲ್ಲಿ ಸ್ವೀಕರಿಸಿ, ಸಂಬಂಧಿಸಿದ ಅಧಿಕಾರಿಗಳ ಹಾಗೂ ಕಛೇರಿ ಅಧೀಕ್ಷಕರ ಕಿರುಸಹಿ ಮಾಡಿಸಿದ ನಂತರ, ಸದರಿ ಪತ್ರಗಳನ್ನು ನೋಂದಾಯಿಸಿ, ಸಂಬಂಧಪಟ್ಟ ವಿಷಯ ನಿರ್ವಾಹಕರಿಗೆ ಸ್ವೀಕೃತಿ ಪಡೆದು ನೀಡಲಾಗುವುದು ತುರ್ತು ಟಪಾಲುಗಳ ಬಗ್ಗೆ ಆದ್ಯತೆ ಮೇರೆಗೆ ವಿಷಯ ನಿರ್ವಾಹಕರು ಕಛೇರಿ ಕೈಪಿಡಿಯ ಪ್ರಕಾರ, ಕಡತವನ್ನು ಪ್ರಾರಂಭಿಸಿ, ಅಧಿಕಾರಿಗಳ ಅನುಮೋದನೆಗಾಗಿ ಅಥವಾ ಮಂಜೂರಾತಿಗಾಗಿ ಕ್ರಮ ಕೈಗೊಳ್ಳುವರು.

**4. ಇಲಾಖೆಯು ತನ್ನ ಪ್ರಕಾರ್ಯಗಳನ್ನು ನಿರ್ವಹಿಸುವಲ್ಲಿ ರೂಪಿಸಿರುವ ಗುಣಮಟ್ಟಗಳು:**

1. ಕಛೇರಿಯಲ್ಲಿ ಸ್ವೀಕರಿಸಲಾಗುವ ಎಲ್ಲಾ ಕಾಗದ ಪತ್ರಗಳನ್ನು ಸಾಮಾನ್ಯ ಸ್ವೀಕೃತಿ ಶಾಖೆಯಲ್ಲಿ ನೋಂದಾಯಿಸಿ, ಆ ದಿನವೇ ವಿಷಯ ನಿರ್ವಾಹಕರಿಗೆ ನೀಡುವಂತಹ ವ್ಯವಸ್ಥೆ ಹಾಗೂ ನಿಗದಿತ ಅವಧಿಯೊಳಗೆ ಇತ್ಯರ್ಥಪಡಿಸುವುದು.
2. ಕಾರ್ಯಕ್ರಮಗಳ ಪ್ರಗತಿ ಪರಿಶೀಲನೆ ಮಾಡಲು ಮಾಸಿಕ ಸಭೆಗಳನ್ನು ಏರ್ಪಡಿಸುವುದು.
3. ಆಗಿಂದಾಗ್ಗೆ ಅಧಿಕಾರಿಗಳಿಂದ ಹಾಗೂ ಕಛೇರಿ ಅಧೀಕ್ಷಕರಿಂದ ವಿಷಯ ನಿರ್ವಾಹಕರ ಮೇಜು ತಪಾಸಣೆ ಕಾರ್ಯ.
4. ಇಲಾಖಾ ಸಂಸ್ಥೆಗಳ ಸಿಬ್ಬಂದಿ ವರ್ಗದವರಿಗೆ ಕಾರ್ಯಾಗಾರ ನಡೆಸುವುದು.
5. ಸರ್ಕಾರವು/ ಮೇಲಧಿಕಾರಿಗಳು ನೀಡುವ ಆದೇಶಗಳನ್ನು ಹಾಗೂ ಸುತ್ತೋಲೆಗಳನ್ನು ತ್ವರಿತಗತಿಯಲ್ಲಿ ಪಾಲಿಸುವುದು.
6. ಸಾರ್ವಜನಿಕ ಕುಂದುಕೊರತೆಗಳ ಬಗ್ಗೆ ಸಾರ್ವಜನಿಕರಿಗೆ ಸೂಕ್ತ ಮಾಹಿತಿ ನೀಡುವುದು.

**5. ಮಾಹಿತಿಯನ್ನು ಪಡೆಯುವುದಕ್ಕಾಗಿ ನಾಗರೀಕರಿಗೆ ದೊರೆಯಬಹುದಾದ ಅನುಕೂಲತೆಯ ವಿವರಗಳು:**

1. ಇಲಾಖೆಯ ಕಾರ್ಯಕ್ರಮ ಹಾಗೂ ಯೋಜನೆಗಳಿಗೆ ಸಂಬಂಧಿಸಿದ ಮಾಹಿತಿಗಳು, ಆದೇಶಗಳು, ವಾರ್ಷಿಕ ಸಂಕಲನ ಕ್ರಿಯಾಯೋಜನೆ ಹಾಗೂ ಕಿರುಹೊತ್ತಿಗೆಗಳನ್ನು ಸಾರ್ವಜನಿಕರ ಪ್ರಕಟಣೆಗಾಗಿ ನೀಡುವುದು.
2. ಸಾರ್ವಜನಿಕ ಕುಂದುಕೊರತೆಗಳಿಗೆ ಸಂಬಂಧಿಸಿದಂತೆ, ಪ್ರತ್ಯೇಕ ಸಂಪರ್ಕಾಧಿಕಾರಿಗಳನ್ನು ನೇಮಿಸಿರುವುದು.
3. ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2000 ರೀತ್ಯಾ ರಾಜ್ಯ ಮಟ್ಟದಲ್ಲಿ, ಜಂಟಿ ನಿರ್ದೇಶಕರು (ವಿ.ಘ.ಯೋ.) ಯವರನ್ನು ಸಕ್ಷಮ ಪ್ರಾಧಿಕಾರವಾಗಿ ಹಾಗೂ ಸಮಾಜ ಕಲ್ಯಾಣ ಆಯುಕ್ತರವರನ್ನು ಮೇಲ್ಮನವಿ ಪ್ರಾಧಿಕಾರವನ್ನಾಗಿ, ಹಾಗೂ ಜಿಲ್ಲಾ ಮಟ್ಟದಲ್ಲಿ ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳನ್ನು ಸಕ್ಷಮ ಪ್ರಾಧಿಕಾರವನ್ನಾಗಿ, ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್ ರವರನ್ನು ಮೇಲ್ಮನವಿ ಪ್ರಾಧಿಕಾರಿಯನ್ನಾಗಿಯೂ, ಅದೇ ರೀತಿ ತಾಲ್ಲೂಕು ಮಟ್ಟದಲ್ಲಿ ಕಛೇರಿ ಅಧೀಕ್ಷಕರನ್ನು ಸಕ್ಷಮ ಪ್ರಾಧಿಕಾರಿಯಾಗಿ ಹಾಗೂ ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳನ್ನು ಮೇಲ್ಮನವಿ ಪ್ರಾಧಿಕಾರಿಯನ್ನಾಗಿ ನೇಮಿಸಲಾಗಿದೆ.
4. ಇಲಾಖೆಯಲ್ಲಿ ಮಂಜೂರಾತಿಗಾಗಿ ನೀಡಲಾಗಿರುವ ಕಾಲಾವಧಿ ನಿಗದಿ ವಿಚಾರಗಳನ್ನು ಸಾರ್ವಜನಿಕರಿಗೆ ತಿಳಿಸುವಂಥಹ ಕಾರ್ಯಪಟ್ಟಿ ಮಾಡಿ ಪ್ರಕಟಿಸಿದೆ.

ಪಿ.ಆರ್.1083 ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿ, ಬಳ್ಳಾರಿ.

## ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಉಪ ವಿಭಾಗ, ಚಿತ್ರದುರ್ಗ

**ತಿದ್ದುಪಡಿ ಆದೇಶ (ಎರ್ರಾಟಂ)**

**ಅಮಲ್ಜಾರಿ ಅರ್ಜಿ ಸಂಖ್ಯೆ: 137/ 2003-04**

ದಿನಾಂಕ: 27.03.2004ರಂದು ಮಾರಾಟ ಸ್ಥಿರೀಕರಣದ ನಮೂನೆ 10ರಲ್ಲಿ ನೀಡಿರುವ ಆದೇಶದಲ್ಲಿ ಸ್ಥಿರ ಸ್ವತ್ತುಗಳ ವಿವರ (ಚೆಕ್ಕುಬಂದಿ) ಎಂಬ ಶೀರ್ಷಿಕೆಯಲ್ಲಿ ಅಸೆಸ್‌ಮೆಂಟ್ ನಂ. 2887ರ ಬದಲಾಗಿ 2877 ಎಂದು ತಪ್ಪಾಗಿ ಮುದ್ರಿತವಾಗಿರುತ್ತದೆ. ಆದ್ದರಿಂದ ಅಸೆಸ್‌ಮೆಂಟ್ ನಂಬರ್ 2877ರ ಬದಲಾಗಿ 2887 ಎಂದು ಓದಿಕೊಳ್ಳತಕ್ಕದ್ದು.

ದಿನಾಂಕ: 30.06.2004
ಸ್ಥಳ: ಚಿತ್ರದುರ್ಗ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ಸಹಕಾರ ಸಂಘಗಳ ಸಹಾಯಕ ನಿಬಂಧಕರ
ಕಛೇರಿ, ಚಿತ್ರದುರ್ಗ.

ಪಿ.ಆರ್.1084

## ಪೊಲೀಸ್ ಕಮೀಷನರ್ ರವರ ಕಛೇರಿ, ನಂ.1, ಇನ್‌ಫೆಂಟ್ರಿ ರಸ್ತೆ, ಬೆಂಗಳೂರುನಗರ

**ಅಧಿಸೂಚನೆ**

**ಸಂಖ್ಯೆ: 30/ಸಂವಿ/ಸಿ.ಓ.ಪಿ/2004, ದಿನಾಂಕ: 22ನೇ ಜುಲೈ, 2004**

ಬೆಂಗಳೂರು ನಗರ, ಜೀವನಭೀಮಾನಗರ ಪೊಲೀಸ್ ಠಾಣೆ ಸರಹದ್ದಿಗೆ ಸೇರಿರುವ ಜೀವನ್‌ಭೀಮಾನಗರ ಮುಖ್ಯ ರಸ್ತೆಯು ಸುಮಾರು 1 ವರೆ ಕಿ.ಮೀ. ಉದ್ದವಿದ್ದು, ರಸ್ತೆಯ ಎರಡೂ ಬದಿಯಿಂದಲೂ ಭಾರಿ ಸರಕು ಸಾಗಾಣಿಕಾ ವಾಹನ ಸಂಚಾರವನ್ನು ಹೊರತುಪಡಿಸಿ ಇತರೆ ಎಲ್ಲಾ ತರಹದ ವಾಹನ ಸಂಚಾರವಿರುತ್ತದೆ. ಈ ರಸ್ತೆಯಲ್ಲಿ ರಸ್ತೆಯ ಎರಡೂ ಬದಿಯಲ್ಲಿ ವಾಹನಗಳನ್ನು ನಿಲ್ಲಿಸುವುದರಿಂದ ಸುಗಮ ಸಂಚಾರಕ್ಕೆ ಅಡಚಣೆಯಾಗುತ್ತಿರುತ್ತದೆ. ಈ ರಸ್ತೆಯು ಕಿರಿದಾಗಿದ್ದು ಹೆಚ್ಚಿನ ಬಿ.ಎಂ.ಟಿ.ಸಿ. ಬಸ್ಸುಗಳು ಓಡಾಡುವುದರಿಂದ ಸಂಚಾರ ಸ್ಥಗಿತಗೊಂಡು ರಸ್ತೆ ಅಪಘಾತಗಳು ಸಂಭವಿಸುವ ಸಾಧ್ಯತೆ ಕಂಡು ಬರುತ್ತದೆ.

ಜೀವನ್‌ಭೀಮಾನಗರ ಮುಖ್ಯ ರಸ್ತೆಯಲ್ಲಿ ಸುಗಮ ಸಂಚಾರ ದೃಷ್ಟಿಯಿಂದ ಹಾಗೂ ಸಾರ್ವಜನಿಕರ ಹಿತದೃಷ್ಟಿಯಿಂದ ಸದರಿ ರಸ್ತೆಯಲ್ಲಿ, ರಸ್ತೆಯ ಎರಡೂ ಬದಿಯಲ್ಲಿ ವಾಹನಗಳ ನಿಲುಗಡೆಯನ್ನು ನಿಷೇಧಿಸುವುದು ಸೂಕ್ತ ಎಂದು ಕಂಡುಬರುತ್ತದೆ.

ಆದ್ದರಿಂದ ಕಲಂ 115 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 3 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960ರ ಪ್ರಕಾರ ನನ್ನ ಅಧಿಕಾರ ವ್ಯಾಪ್ತಿಯಲ್ಲಿರುವ ಅಧಿಕಾರವನ್ನು ಚಲಾಯಿಸಿ ಎಸ್. ಮರಿಸ್ವಾಮಿ, ಐ.ಪಿ.ಎಸ್, ಪೊಲೀಸ್ ಕಮೀಷನರ್, ಬೆಂಗಳೂರು ನಗರ ಆದ ನಾನು ಈ ಕೆಳಕಂಡಂತೆ ಸಂಚಾರ ನಿರ್ಬಂಧನೆಗಳನ್ನು ಆದೇಶಿಸಿರುತ್ತೇನೆ.

"ಜೀವನ್ ಭೀಮಾನಗರ ಮುಖ್ಯ ರಸ್ತೆಯಲ್ಲಿ ರಸ್ತೆಯ ಪೂರ್ವ ದಿಕ್ಕಿನ ಸುರಂಜನ್‌ದಾಸ್ ರಸ್ತೆ ಜಂಕ್ಷನ್‌ನಿಂದ, ಪಶ್ಚಿಮ ದಿಕ್ಕಿನ 80 ಅಡಿ ರಸ್ತೆ ಜಂಕ್ಷನ್ ವರೆಗೆ ರಸ್ತೆಯ ಎರಡೂ ಬದಿಯಲ್ಲಿ ಯಾವುದೇ ತರಹದ ವಾಹನಗಳ ನಿಲುಗಡೆಯನ್ನು ನಿಷೇಧಿಸಿ ಆದೇಶಿಸಿರುತ್ತೇನೆ."

ಅಂತೆಯೇ ಕಲಂ 116 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 4 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮೇಲ್ಕಂಡ ನಿರ್ಬಂಧನೆಯನ್ನು ಜಾರಿಗೊಳಿಸಲು ಬೇಕಾದ ಅಗತ್ಯ ಸೂಚನಾ ಫಲಕಗಳನ್ನು ಸೂಕ್ತ ಸ್ಥಳಗಳಲ್ಲಿ ಅಳವಡಿಸಲು ಸ್ಥಳೀಯ ಅಧಿಕಾರಿಗಳಿಗೆ ಆದೇಶಿಸಿರುತ್ತೇನೆ.

ಈ ಮೇಲ್ಕಂಡ ವ್ಯವಸ್ಥೆಯನ್ನು ದಿನಾಂಕ: 23.07.2004 ರಿಂದ ಜಾರಿಗೆ ಬರುವಂತೆ ಆದೇಶಿಸಿರುತ್ತೇನೆ.

ಈ ಆದೇಶವನ್ನು ನಾನು ಈ ದಿನ ಅಂದರೆ ದಿನಾಂಕ: 23.07.2004ರಂದು ನನ್ನ ಸಹಿ ಮತ್ತು ಮುದ್ರೆಯೊಂದಿಗೆ ನೀಡಿರುತ್ತೇನೆ.

**ಎಸ್. ಮರಿಸ್ವಾಮಿ**
ಪೊಲೀಸ್ ಕಮೀಷನರ್, ಬೆಂಗಳೂರು ನಗರ.

ಪಿ.ಆರ್. 1085

## ಪೊಲೀಸ್ ಕಮೀಷನರ್ ರವರ ಕಛೇರಿ, ನಂ.1, ಇನ್‌ಫೆಂಟ್ರಿ ರಸ್ತೆ, ಬೆಂಗಳೂರುನಗರ

**ಅಧಿಸೂಚನೆ**

**ಸಂಖ್ಯೆ: 31/ಸಂವಿ/ಸಿ.ಓ.ಪಿ/2004, ದಿನಾಂಕ: 22ನೇ ಜುಲೈ, 2004**

ಬೆಂಗಳೂರು ನಗರ, ಅಲಸೂರು ಸಂಚಾರ ಪೊಲೀಸ್ ಠಾಣೆ ಸರಹದ್ದಿನಲ್ಲಿರುವ ತಾಮರೈಕಣ್ಣನ್ ರಸ್ತೆಯು ಸುಮಾರು 25 ಅಡಿ ಅಗಲ ಇರುತ್ತದೆ. ಈ ರಸ್ತೆಯಲ್ಲಿ ಎರಡೂ ದಿಕ್ಕಿನಿಂದಲೂ ವಾಹನ ಸಂಚಾರ ಇರುತ್ತದೆ. ಇತ್ತೀಚಿಗೆ ಸ್ವಾಮಿ ವಿವೇಕಾನಂದ ರಸ್ತೆಯನ್ನು (ಹಳೇ ಮದ್ರಾಸ್ ರಸ್ತೆ) ಏಕಮುಖ ಸಂಚಾರ ವ್ಯವಸ್ಥೆ ಮಾಡಿದಾಗಿನಿಂದ ತಾಮರೈಕಣ್ಣನ್ ರಸ್ತೆಯಲ್ಲಿ ಬಿ.ಎಂ.ಟಿ.ಸಿ. ಬಸ್ಸುಗಳ ಸಂಚಾರದ ಒತ್ತಡ ಅಧಿಕವಾಗಿ ಇಡೀ ರಸ್ತೆಯ ಸುಗಮ ಸಂಚಾರಕ್ಕೆ ಅಡಚಣೆಯಾಗಿ, ಆಗಾಗ್ಗೆ ಅಪಘಾತಗಳು ಸಂಭವಿಸುತ್ತಿದ್ದು ಇದು ಸಾರ್ವಜನಿಕರ ಹಿತದೃಷ್ಟಿಗೆ ಧಕ್ಕೆಯಾಗಿರುತ್ತದೆ. ಈ ಗೊಂದಲದ ಕಾರಣವಾಗಿ ಸಾರ್ವಜನಿಕ ಹಿತದೃಷ್ಟಿಯಿಂದ ಹಾಗೂ ಸುಗಮ ಸಂಚಾರದ ಅನುಕೂಲತೆಗಾಗಿ ಈ ಕೆಳಕಂಡ ವಾಹನ ಸಂಚಾರ ನಿರ್ಬಂಧನೆಗಳನ್ನು ಕಾರ್ಯರೂಪಕ್ಕೆ ತರುವುದು ಸೂಕ್ತ ಎಂದು ಕಂಡುಬಂದಿರುತ್ತದೆ.

ಆದ್ದರಿಂದ ಕಲಂ 115 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 3 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960ರ ಪ್ರಕಾರ ನನ್ನ ಅಧಿಕಾರ ವ್ಯಾಪ್ತಿಯಲ್ಲಿರುವ ಅಧಿಕಾರವನ್ನು ಚಲಾಯಿಸಿ ಎಸ್. ಮರಿಸ್ವಾಮಿ, ಐ.ಪಿ.ಎಸ್, ಪೊಲೀಸ್ ಕಮೀಷನರ್, ಬೆಂಗಳೂರು ನಗರ ಆದ ನಾನು ಈ ಕೆಳಕಂಡಂತೆ ಸಂಚಾರ ನಿರ್ಬಂಧನೆಗಳನ್ನು ಆದೇಶಿಸಿರುತ್ತೇನೆ.

1. ತಾಮರೈಕಣ್ಣನ್ ರಸ್ತೆಯಲ್ಲಿ, ಸ್ವಾಮಿ ವಿವೇಕಾನಂದ ರಸ್ತೆ ಜಂಕ್ಷನ್‌ನಿಂದ ಮರ್ಫಿ ರಸ್ತೆ ಜಂಕ್ಷನ್‌ವರೆಗೆ ಎಲ್ಲಾ ತರಹದ ವಾಹನ ಸಂಚಾರವನ್ನು ನಿಷೇಧಿಸಿ ಆದೇಶಿಸಿರುತ್ತೇನೆ.

2. ತಾಮರೈಕಣ್ಣನ್ ರಸ್ತೆಯಲ್ಲಿ, ಸ್ವಾಮಿ ವಿವೇಕಾನಂದ ರಸ್ತೆ ಜಂಕ್ಷನ್‌ನಿಂದ ಮರ್ಫಿ ರಸ್ತೆ ಜಂಕ್ಷನ್‌ವರೆಗೆ ರಸ್ತೆಯ ಎರಡೂ ಬದಿಯಲ್ಲಿ, ಎಲ್ಲಾ ತರಹದ ವಾಹನ ನಿಲುಗಡೆಯನ್ನು ನಿಷೇಧಿಸಿ ಆದೇಶಿಸಿರುತ್ತೇನೆ.

3. ತಾಮರೈಕಣ್ಣನ್ ರಸ್ತೆಯಲ್ಲಿ ಬಿ.ಎಂ.ಟಿ.ಸಿ. ಬಸ್‌ಗಳನ್ನು ಹೊರತುಪಡಿಸಿ ಇತರೆ ಖಾಸಗಿ ಬಸ್‌ಗಳ ಸಂಚಾರವನ್ನು ನಿಷೇಧಿಸಿ ಆದೇಶಿಸಿರುತ್ತೇನೆ.

ಅಂತೆಯೇ ಕಲಂ 116 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 4 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮೇಲ್ಕಂಡ ನಿರ್ಬಂಧನೆಯನ್ನು ಜಾರಿಗೊಳಿಸಲು ಬೇಕಾದ ಅಗತ್ಯ ಸೂಚನಾ ಫಲಕಗಳನ್ನು ಸೂಕ್ತ ಸ್ಥಳಗಳಲ್ಲಿ ಅಳವಡಿಸಲು ಸ್ಥಳೀಯ ಅಧಿಕಾರಿಗಳಿಗೆ ಆದೇಶಿಸಿರುತ್ತೇನೆ.

ಈ ಮೇಲ್ಕಂಡ ವ್ಯವಸ್ಥೆಯನ್ನು ದಿನಾಂಕ: 23.07.2004 ರಿಂದ ಜಾರಿಗೆ ಬರುವಂತೆ ಆದೇಶಿಸಿರುತ್ತೇನೆ.

ಈ ಆದೇಶವನ್ನು ನಾನು ಈ ದಿನ ಅಂದರೆ ದಿನಾಂಕ: 23.07.2004ರಂದು ನನ್ನ ಸಹಿ ಮತ್ತು ಮುದ್ರೆಯೊಂದಿಗೆ ನೀಡಿರುತ್ತೇನೆ.

ಎಸ್. ಮರಿಸ್ವಾಮಿ
ಪೊಲೀಸ್ ಕಮೀಷನರ್, ಬೆಂಗಳೂರು ನಗರ.

ಪಿ.ಆರ್. 1086

## ಪೊಲೀಸ್ ಕಮೀಷನರ್ ರವರ ಕಛೇರಿ, ನಂ.1, ಇನ್‌ಫೆಂಟ್ರಿ ರಸ್ತೆ, ಬೆಂಗಳೂರುನಗರ

## ಅಧಿಸೂಚನೆ

**ಸಂಖ್ಯೆ: 28/ಸಂಪಿ/ಸಿ.ಓ.ಪಿ/2003, ದಿನಾಂಕ: 22ನೇ ಜುಲೈ, 2004**

ಬೆಂಗಳೂರು ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ, ಬೆಂಗಳೂರು ರವರು ಬೆಂಗಳೂರು ನಗರ ಕೆ.ಆರ್. ಪುರಂ ಸಂಚಾರ ವಲಯ ವ್ಯಾಪ್ತಿಗೆ ಬರುವ ರಾಮಮೂರ್ತಿನಗರ ಮುಖ್ಯ ರಸ್ತೆಯಲ್ಲಿ ಅರುಣ್ ಐಸ್‌ಕ್ರೀಂ ಪಾರ್ಲರ್ ರಸ್ತೆಯಿಂದ ಕಲ್ಕೆರೆ ಮುಖ್ಯ ರಸ್ತೆಯವರೆಗೆ ರಸ್ತೆಯನ್ನು ಅಗೆದು ನೀರಿನ ಕೊಳವೆ ಅಳವಡಿಸುವ ಹಾಗೂ ಕಲ್ವರ್ಟ್ ನಿರ್ಮಿಸುವ ಕಾವೇರಿ ನೀರು ಸರಬರಾಜು ಯೋಜನೆಯ 4ನೇ ಹಂತದ ಕಾಮಗಾರಿ ಕೆಲಸವನ್ನು ಕೈಗೊಂಡಿರುತ್ತಾರೆ. ಈ ಕಾಮಗಾರಿ ಕೆಲಸವು ಪೂರ್ಣಗೊಳ್ಳಲು ಸುಮಾರು ಒಂದೂವರೆ ತಿಂಗಳ ಕಾಲಾವಧಿ ಹಿಡಿಯುವುದರಿಂದ ಬೆಂಗಳೂರು ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯ ಕೋರಿಕೆಯಂತೆ ಈ ರಸ್ತೆಯಲ್ಲಿನ ವಾಹನ ಸಂಚಾರವನ್ನು ಪೂರ್ಣವಾಗಿ ಸ್ಥಗಿತಗೊಳಿಸಬೇಕಾಗಿರುವುದರಿಂದ, ಸಾರ್ವಜನಿಕ ಹಿತದೃಷ್ಟಿಯಿಂದ ಹಾಗೂ ಸುಗಮ ಸಂಚಾರದ ಉದ್ದೇಶದಿಂದ ವಾಹನಗಳ ಸಂಚಾರವನ್ನು ಪರ್ಯಾಯ ರಸ್ತೆಗಳ ಮೂಲಕ ಸಂಚರಿಸುವಂತೆ ವ್ಯವಸ್ಥೆ ಮಾಡಿಕೊಡುವುದು ಅನಿವಾರ್ಯವಾಗಿರುತ್ತದೆ.

ಆದ್ದರಿಂದ ಕಲಂ 115 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 3 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960ರ ಪ್ರಕಾರ ನನ್ನ ಅಧಿಕಾರ ವ್ಯಾಪ್ತಿಯಲ್ಲಿರುವ ಅಧಿಕಾರವನ್ನು ಚಲಾಯಿಸಿ ಎಸ್. ಮರಿಸ್ವಾಮಿ, ಐ.ಪಿ.ಎಸ್, ಪೊಲೀಸ್ ಕಮೀಷನರ್, ಬೆಂಗಳೂರು ನಗರ ಆದ ನಾನು ಈ ಕೆಳಕಂಡಂತೆ ಸಂಚಾರ ನಿರ್ಬಂಧನೆಗಳನ್ನು ಆದೇಶಿಸಿರುತ್ತೇನೆ.

1. ರಾಮಮೂರ್ತಿನಗರ ಮುಖ್ಯ ರಸ್ತೆಯಲ್ಲಿ ಪಶ್ಚಿಮ ದಿಕ್ಕಿನಿಂದ ಅಂದರೆ ರಾಮಮೂರ್ತಿನಗರ ಮುಖ್ಯ ರಸ್ತೆಯಲ್ಲಿ ಪೂರ್ವ ದಿಕ್ಕಿನ ಕಡೆಗೆ ಸಂಚರಿಸುವ ಬಿ.ಎಂ.ಟಿ.ಸಿ. ಬಸ್‌ಗಳು, ಆಟೋರಿಕ್ಷಾ, ಕಾರು ಮತ್ತು ದ್ವಿಚಕ್ರ ವಾಹನ ಸಂಚಾರವನ್ನು ಹೊರತುಪಡಿಸಿ ಇತರೆ ಭಾರಿ ವಾಹನಗಳಾದ ಲಾರಿ, ಹೆಚ್.ಪಿ.ವಿ, ಹೆಚ್.ಜಿ.ವಿ, ಎಲ್.ಜಿ.ವಿ. ಮ್ಯಾಕ್ಸಿ ಕ್ಯಾಬ್, ಟ್ರಾಕ್ಟರ್ ಮತ್ತು ಟ್ರೈಲರ್ ಹಾಗೂ ಇತರೆ ಭಾರಿ ವಾಹನಗಳ ಸಂಚಾರವನ್ನು ರಾಮಮೂರ್ತಿನಗರ ಮುಖ್ಯ ರಸ್ತೆ ಮತ್ತು ಆನಂದಪುರ ಕ್ರಾಸ್ ರಸ್ತೆ ಜಂಕ್ಷನ್ ಹತ್ತಿರ ನಿರ್ಬಂಧಿಸಿ ಎಡಕ್ಕೆ ತಿರುಗಿ ಆನಂದಪುರ ಮುಖ್ಯ ರಸ್ತೆ ಮುಖಾಂತರ ಹಳೇ ಮದ್ರಾಸ್ ರಸ್ತೆಗೆ ಸಾಗಲು ಅನುವು ಮಾಡಿಕೊಡಲಾಗಿದೆ.

2. ರಾಮಮೂರ್ತಿನಗರ ಮುಖ್ಯ ರಸ್ತೆ ಮುಖಾಂತರ ಕೆ.ಆರ್. ಪುರಂಗೆ ಹೋಗಿ ಬರುವ ಎಲ್ಲಾ ಬಿ.ಎಂ.ಟಿ.ಸಿ. ಬಸ್‌ಗಳ ಸಂಚಾರವನ್ನು ಕಸ್ತೂರಿನಗರ ಕ್ರಾಸ್ ಹತ್ತಿರ ಬಲ ತಿರುವು ತೆಗೆದುಕೊಂಡು ತೂಗು ಸೇತುವೆ ಮೂಲಕ ಅಥವಾ ರಾಮಮೂರ್ತಿನಗರ ಮುಖ್ಯ ರಸ್ತೆಯ ಆನಂದಪುರ ಕ್ರಾಸ್ ರಸ್ತೆ ಮುಖಾಂತರ ಟಿ.ಸಿ. ಪಾಳ್ಯ ಸೇರಿ ಕೆ.ಆರ್. ಪುರಂ ಕಡೆಗೆ ಸಂಚರಿಸುವಂತೆ ಅವಕಾಶ ಕಲ್ಪಿಸಿಕೊಡಲಾಗಿದೆ.

3. ರಾಮಮೂರ್ತಿನಗರ ಮುಖ್ಯ ರಸ್ತೆ ಮುಖಾಂತರ, ಬೆಂಗಳೂರು ನಗರದ ಕಡೆಗೆ ಸಂಚರಿಸುವ ಎಲ್ಲಾ ಬಿ.ಎಂ.ಟಿ.ಸಿ. ಬಸ್‌ಗಳ ಮತ್ತು ಇತರೆ ವಾಹನಗಳ ಸಂಚಾರವನ್ನು ಹಳೇ ಮದ್ರಾಸ್ ರಸ್ತೆ ತೂಗು ಸೇತುವೆ ಮುಖಾಂತರ ಸಂಚರಿಸಲು ವ್ಯವಸ್ಥೆ ಮಾಡಲಾಗಿದೆ.

4. ಹಳೇ ಮದ್ರಾಸ್ ರಸ್ತೆ ಮುಖಾಂತರ ಐ.ಟಿ.ಐ. ಕಾಲೋನಿಗೆ ಸಂಚರಿಸುವ ವಾಹನ ಸಂಚಾರವನ್ನು ಉತ್ತರ ರಿಂಗ್ ರಸ್ತೆವರೆವಿಗೂ ಸಂಚರಿಸುವಂತೆ ಅವಕಾಶ ಕಲ್ಪಿಸಲಾಗಿದೆ.

ಅಂತೆಯೇ ಕಲಂ 116 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 4 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960ರಲ್ಲಿ ಪ್ರದತ್ತವಾದ ಅಧಿಕಾರವನ್ನು ಉಪಯೋಗಿಸಿಕೊಂಡು ಮೇಲ್ಕಂಡ ನಿರ್ಬಂಧನೆಯನ್ನು ಜಾರಿಗೊಳಿಸಲು ಬೇಕಾದ ಅಗತ್ಯ ಸೂಚನಾ ಫಲಕಗಳನ್ನು ಸೂಕ್ತ ಸ್ಥಳಗಳಲ್ಲಿ ಅಳವಡಿಸಲು ಸ್ಥಳೀಯ ಅಧಿಕಾರಿಗಳಿಗೆ ಆದೇಶಿಸಿರುತ್ತೇನೆ.

ಈ ಮೇಲ್ಕಂಡ ವ್ಯವಸ್ಥೆಯನ್ನು ದಿನಾಂಕ: 28.07.2004 ರಿಂದ 1ವರೆ ತಿಂಗಳ ಕಾಲ ತಾತ್ಕಾಲಿಕವಾಗಿ ಜಾರಿಗೆ ಬರುವಂತೆ ಆದೇಶಿಸಿರುತ್ತೇನೆ.

ಈ ಆದೇಶವನ್ನು ನಾನು ಈ ದಿನ ಅಂದರೆ ದಿನಾಂಕ: 23.07.2004ರಂದು ನನ್ನ ಸಹಿ ಮತ್ತು ಮುದ್ರೆಯೊಂದಿಗೆ ನೀಡಿರುತ್ತೇನೆ.

ಎಸ್. ಮರಿಸ್ವಾಮಿ
ಪೊಲೀಸ್ ಕಮೀಷನರ್, ಬೆಂಗಳೂರು ನಗರ.

ಪಿ.ಆರ್. 1087

## ಪೊಲೀಸ್ ಕಮೀಷನರ್ ರವರ ಕಛೇರಿ, ನಂ.1, ಇನ್‌ಫೆಂಟ್ರಿ ರಸ್ತೆ, ಬೆಂಗಳೂರುನಗರ

## ಅಧಿಸೂಚನೆ

**ಸಂಖ್ಯೆ: 26/ಸಂವಿ/ಸಿ.ಓ.ಪಿ/2004, ದಿನಾಂಕ: 15ನೇ ಜುಲೈ, 2004**

ಬೆಂಗಳೂರು ನಗರ, ಕಬ್ಬನ್‌ಪಾರ್ಕ್ ಸಂಚಾರ ವಲಯದ ವ್ಯಾಪ್ತಿಯಲ್ಲಿರುವ ರೆಸ್ಟ್‌ಹೌಸ್ ಕ್ರಿಸೆಂಟ್ ರಸ್ತೆಯಲ್ಲಿ ಎಂ.ಜಿ. ರಸ್ತೆ ಜಂಕ್ಷನ್‌ನಿಂದ ಚರ್ಚ್ ಸ್ಟ್ರೀಟ್ ಜಂಕ್ಷನ್ ವರೆಗೆ ದ್ವಿಮುಖ ಸಂಚಾರವಿರುತ್ತೆ. ಈ ರಸ್ತೆಯ ಎರಡೂ ಬದಿಗಳಲ್ಲೂ ವಾಣಿಜ್ಯ ಮಳಿಗೆಗಳು, ಸರ್ಕಾರಿ ಕಛೇರಿಗಳು ಹಾಗೂ ಇತರೆ ಸರ್ಕಾರೇತರ ಕಛೇರಿಗಳಿರುವುದರಿಂದ ವಾಹನ ಸಂಚಾರ ಅಧಿಕಗೊಂಡು ಸುಗಮ ಸಂಚಾರಕ್ಕೆ ಅಡ್ಡಿ ಉಂಟಾಗುತ್ತಿರುವುದು ಮತ್ತು ವಾಹನ ಸಂಚಾರದಲ್ಲಿ ನಿಧಾನಗತಿ ಉಂಟಾಗಿರುವುದು ಹಾಗೂ ಅಪಘಾತಗಳು ಸಂಭವಿಸುತ್ತಿರುವುದು ಕಂಡು ಬಂದಿರುತ್ತದೆ. ಈ ರಸ್ತೆಯಲ್ಲಿ ವಾಹನಗಳ ಸುಗಮ ಸಂಚಾರಕ್ಕೆ ಅನುಕೂಲವಾಗುವಂತೆ ಹಾಗೂ ವಾಹನಗಳ ಅಪಘಾತಗಳನ್ನು ತಪ್ಪಿಸುವ ಸಲುವಾಗಿ ಸಾರ್ವಜನಿಕ ಹಿತಾಸಕ್ತಿ ಗಮನಿಸಿ ಹಾಲಿ ಇರುವ ದ್ವಿಮುಖ ಸಂಚಾರ ವ್ಯವಸ್ಥೆಯನ್ನು ನಿರ್ಬಂಧಿಸಿ ಏಕ ಮುಖ ಸಂಚಾರ ವ್ಯವಸ್ಥೆಯನ್ನು ಜಾರಿಗೊಳಿಸುವುದು ಅವಶ್ಯಕವೆಂದು ಕಂಡು ಬಂದಿರುತ್ತದೆ.

ಆದ್ದರಿಂದ ಕಲಂ 115 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 3 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960ರ ಪ್ರಕಾರ ನನ್ನ ಅಧಿಕಾರ ವ್ಯಾಪ್ತಿಯಲ್ಲಿರುವ ಅಧಿಕಾರವನ್ನು ಚಲಾಯಿಸಿ ಎಸ್. ಮರಿಸ್ವಾಮಿ, ಐ.ಪಿ.ಎಸ್, ಪೊಲೀಸ್ ಕಮೀಷನರ್, ಬೆಂಗಳೂರು ನಗರ ಆದ ನಾನು ಈ ಕೆಳಕಂಡಂತೆ ಸಂಚಾರ ನಿರ್ಬಂಧನೆಗಳನ್ನು ಆದೇಶಿಸಿರುತ್ತೇನೆ.

**ರೆಸ್ಟ್‌ಹೌಸ್ ಕ್ರಿಸೆಂಟ್ ರಸ್ತೆ:** ಈ ರಸ್ತೆಯಲ್ಲಿ ಎಂ.ಜಿ. ರಸ್ತೆ ಜಂಕ್ಷನ್‌ನಿಂದ ಚರ್ಚ್ ಸ್ಟ್ರೀಟ್ ಜಂಕ್ಷನ್ ವರೆಗೆ ಉತ್ತರದಿಂದ ದಕ್ಷಿಣಕ್ಕೆ ಚಲಿಸುವ ಸಂಚಾರವನ್ನು ಯಥಾಸ್ಥಿತಿಯಲ್ಲಿರಿಸಿಕೊಂಡು ಚರ್ಚ್ ಸ್ಟ್ರೀಟ್ ಜಂಕ್ಷನ್‌ನಿಂದ ಎಂ.ಜಿ. ರಸ್ತೆ ಜಂಕ್ಷನ್ ವರೆಗೆ ದಕ್ಷಿಣದಿಂದ ಉತ್ತರಕ್ಕೆ ಚಲಿಸುವ ಎಲ್ಲಾ ರೀತಿಯ ವಾಹನಗಳ ಸಂಚಾರವನ್ನು ನಿಷೇಧಿಸಲಾಗಿದೆ.

ಅಂತೆಯೇ ಕಲಂ 116 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 4 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮೇಲ್ಕಂಡ ನಿರ್ಬಂಧನೆಯನ್ನು ಜಾರಿಗೊಳಿಸಲು ಬೇಕಾದ ಅಗತ್ಯ ಸೂಚನಾ ಫಲಕಗಳನ್ನು ಸೂಕ್ತ ಸ್ಥಳಗಳಲ್ಲಿ ಅಳವಡಿಸಲು ಸ್ಥಳೀಯ ಅಧಿಕಾರಿಗಳಿಗೆ ಆದೇಶಿಸಿರುತ್ತೇನೆ.

ಈ ಮೇಲ್ಕಂಡ ವ್ಯವಸ್ಥೆಯನ್ನು ದಿನಾಂಕ: 22.07.2004 ರಿಂದ ಜಾರಿಗೆ ಬರುವಂತೆ ಆದೇಶಿಸಿರುತ್ತೇನೆ.

ಈ ಆದೇಶವನ್ನು ನಾನು ಈ ದಿನ ಅಂದರೆ ದಿನಾಂಕ: 22.07.2004ರಂದು ನನ್ನ ಸಹಿ ಮತ್ತು ಮುದ್ರೆಯೊಂದಿಗೆ ನೀಡಿರುತ್ತೇನೆ.

**ಎಸ್. ಮರಿಸ್ವಾಮಿ**
ಪೊಲೀಸ್ ಕಮೀಷನರ್, ಬೆಂಗಳೂರು ನಗರ.

ಪಿ.ಆರ್. 1088

## ಪೊಲೀಸ್ ಕಮೀಷನರ್ ರವರ ಕಛೇರಿ, ನಂ.1, ಇನ್‌ಫೆಂಟ್ರಿ ರಸ್ತೆ, ಬೆಂಗಳೂರುನಗರ

## ಅಧಿಸೂಚನೆ

**ಸಂಖ್ಯೆ: 22/ಸಂವಿ/ಸಿ.ಓ.ಪಿ/2004, ದಿನಾಂಕ: 20ನೇ ಜುಲೈ, 2004**

ಬೆಂಗಳೂರು ನಗರ, ಕಮರ್ಷಿಯಲ್ ಸ್ಟ್ರೀಟ್ ಸಂಚಾರ ವಲಯದ ವ್ಯಾಪ್ತಿಯಲ್ಲಿರುವ ಹೇನ್ಸ್ ರಸ್ತೆ, ಮಿಲ್ಲರ್ಸ್ ರಸ್ತೆ, ನ್ಯೂ ಬಂಬೂ ಬಜಾರ್ ರಸ್ತೆ, ಧನಕೋಟಿ ಲೇನ್, ನೇತಾಜಿ ರಸ್ತೆ, ಸೆಂಟ್ ಜಾನ್ಸ್ ಚರ್ಚ್ ರಸ್ತೆ, ಸ್ಯಾಂಡರ್ಸ್ ರಸ್ತೆ ಹಾಗೂ ಇತರೆ ಅಡ್ಡರಸ್ತೆಗಳಲ್ಲಿ ವಾಹನ ಸಂಚಾರ ಅಧಿಕಗೊಂಡು ಸುಗಮ ಸಂಚಾರಕ್ಕೆ ಅಡ್ಡಿ ಉಂಟಾಗುತ್ತಿರುವುದು ಮತ್ತು ವಾಹನ ಸಂಚಾರದಲ್ಲಿ ನಿಧಾನಗತಿ ಉಂಟಾಗಿರುವುದು ಹಾಗೂ ಅಪಘಾತಗಳು ಸಂಭವಿಸುತ್ತಿರುವುದು ಕಂಡು ಬಂದಿರುತ್ತದೆ. ಈ ರಸ್ತೆಗಳಲ್ಲಿ ವಾಹನಗಳ ಸುಗಮ ಸಂಚಾರಕ್ಕೆ ಅನುಕೂಲವಾಗುವಂತೆ ಹಾಗೂ ವಾಹನಗಳ ಅಪಘಾತಗಳನ್ನು ತಪ್ಪಿಸುವ ಸಲುವಾಗಿ ಹೇನ್ಸ್ ರಸ್ತೆಯಲ್ಲಿ ಭಾಗಶಃ ರಸ್ತೆಯನ್ನು ಏಕಮುಖ ಸಂಚಾರ ವ್ಯವಸ್ಥೆಯನ್ನು ಜಾರಿಗೊಳಿಸುವುದು ಹಾಗೂ ಇತರೆ ಸಂಚಾರ ಮಾರ್ಪಾಡುಗಳನ್ನು ಮಾಡುವುದು ಅವಶ್ಯಕವೆಂದು ಕಂಡು ಬಂದಿರುತ್ತದೆ.

ಆದ್ದರಿಂದ ಕಲಂ 115 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 3 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960ರ ಪ್ರಕಾರ ನನ್ನ ಅಧಿಕಾರ ವ್ಯಾಪ್ತಿಯಲ್ಲಿರುವ ಅಧಿಕಾರವನ್ನು ಚಲಾಯಿಸಿ ಎಸ್. ಮರಿಸ್ವಾಮಿ, ಐ.ಪಿ.ಎಸ್, ಪೊಲೀಸ್ ಕಮೀಷನರ್, ಬೆಂಗಳೂರು ನಗರ ಆದ ನಾನು ಈ ಕೆಳಕಂಡಂತೆ ಸಂಚಾರ ನಿರ್ಬಂಧನೆಗಳನ್ನು ಆದೇಶಿಸಿರುತ್ತೇನೆ.

1. **ಹೇನ್ಸ್ ರಸ್ತೆ:** ಹೇನ್ಸ್ ರಸ್ತೆಯಲ್ಲಿ ಕೆಂಪ್ ರೋಡ್ ಮತ್ತು ಹೇನ್ಸ್ ರಸ್ತೆ ಜಂಕ್ಷನ್‌ನಿಂದ ಹೇನ್ಸ್ ರಸ್ತೆ ಮತ್ತು ಧನಕೋಟಿ ಲೇನ್ ಜಂಕ್ಷನ್‌ವರೆಗಿನ ಸಂಚಾರವನ್ನು ಯಥಾಸ್ಥಿತಿಯಲ್ಲಿರಿಸಿಕೊಂಡು ಧನಕೋಟಿ ಲೇನ್ ಮತ್ತು ಹೇನ್ಸ್ ರಸ್ತೆ ಜಂಕ್ಷನ್‌ನಿಂದ ಕೆಂಪ್ ರೋಡ್ ಮತ್ತು ಹೇನ್ಸ್ ರಸ್ತೆ ಜಂಕ್ಷನ್‌ವರೆಗಿನ ಸಂಚಾರವನ್ನು ಅಂದರೆ ದಕ್ಷಿಣದಿಂದ ಉತ್ತರಕ್ಕೆ ಸಂಚರಿಸುವ ಎಲ್ಲಾ ತರಹದ ವಾಹನಗಳ ಸಂಚಾರವನ್ನು ನಿಷೇಧಿಸಿದೆ.
2. ಹೇನ್ಸ್ ರಸ್ತೆಯಲ್ಲಿ ತಿಮ್ಮಯ್ಯ ರಸ್ತೆ ಕಡೆಯಿಂದ ಬಂದಂತಹ ವಾಹನಗಳು ಹೇನ್ಸ್ ರಸ್ತೆ ಮತ್ತು ಧನಕೋಟಿ ಲೇನ್ ಜಂಕ್ಷನ್‌ನಿಂದ ಕಡ್ಡಾಯ ಎಡ ತಿರುವು ಪಡೆದು ಧನಕೋಟಿ ಲೇನ್‌ನಲ್ಲಿ ಸಂಚರಿಸಿ ಸುಲ್ತಾನ್‌ಜಿ ಗುಂಟಾ ರಸ್ತೆಯಲ್ಲಿ ಸಾಗಿ ನ್ಯೂ ಬಂಬೂ ಬಜಾರ್ ರಸ್ತೆಯಲ್ಲಿ ಬಲ ತಿರುವು ಪಡೆದು ಹೇನ್ಸ್ ರಸ್ತೆ ಮತ್ತು ಸೆಂಟ್ ಜಾನ್ಸ್ ಚರ್ಚ್ ರಸ್ತೆ ಜಂಕ್ಷನ್‌ಗೆ ಬಂದು ಅಲ್ಲಿ ಎಡಕ್ಕೆ ಮಿಲ್ಲರ್ ರಸ್ತೆಗಾಗಲೀ ಅಥವಾ ಬಲ ತಿರುವನ್ನು ಪಡೆದು ಸೆಂಟ್ ಜಾನ್ಸ್ ಚರ್ಚ್ ರಸ್ತೆಗಾಗಲೀ ಸಾಗಲು ಅವಕಾಶವನ್ನು ಕಲ್ಪಿಸಿಕೊಡಲಾಗಿದೆ.

3. ಮಿಲ್ಲರ್ ರಸ್ತೆಯಲ್ಲಿ ಬಂದಂತ ವಾಹನಗಳಿಗೆ ಹೇನ್ಸ್ ರಸ್ತೆ ಮತ್ತು ಸೆಂಟ್ ಜಾನ್ಸ್ ಚರ್ಚ್ ರಸ್ತೆ ಜಂಕ್ಷನ್‌ನಲ್ಲಿ ಎಡ ತಿರುವು ಪಡೆದು ಹೇನ್ಸ್ ರಸ್ತೆಗೆ ಹೋಗುವುದನ್ನು ನಿಷೇಧಿಸಲಾಗಿದೆ.
4. ನ್ಯೂ ಬಂಬೂ ಬಜಾರ್ ರಸ್ತೆಯಲ್ಲಿ ಬಂದಂತ ವಾಹನಗಳು ಹೇನ್ಸ್ ರಸ್ತೆ ಮತ್ತು ಸೆಂಟ್ ಜಾನ್ಸ್ ಚರ್ಚ್ ರಸ್ತೆ ಜಂಕ್ಷನ್‌ನಲ್ಲಿ ನೇರವಾಗಿ ಹೇನ್ಸ್ ರಸ್ತೆ ಕಡೆಗೆ ಚಲಿಸುವುದನ್ನು ನಿಷೇಧಿಸಲಾಗಿದೆ. ಆ ವಾಹನಗಳಿಗೆ ಹೇನ್ಸ್ ರಸ್ತೆ ಮತ್ತು ಸೆಂಟ್ ಜಾನ್ಸ್ ಚರ್ಚ್ ರಸ್ತೆ ಜಂಕ್ಷನ್‌ನಲ್ಲಿ ಬಲ ತಿರುವು ಪಡೆದು ಸೆಂಟ್ ಜಾನ್ಸ್ ರಸ್ತೆಯಲ್ಲಿ ಸಾಗಿ ಕೋಲ್ಸ್ ರಸ್ತೆಯಲ್ಲಿ ಎಡ ತಿರುವು ಪಡೆದು ಸ್ಯಾಂಡರ್ಸ್ ರಸ್ತೆಯಲ್ಲಿ ಸಂಚರಿಸಲು ಅವಕಾಶವನ್ನು ಕಲ್ಪಿಸಲಾಗಿದೆ.
5. **ಸ್ಯಾಂಡರ್ಸ್ ರಸ್ತೆ:** ಸ್ಯಾಂಡರ್ಸ್ ರಸ್ತೆಯು ಕೋಲ್ಸ್‌ರಸ್ತೆಯಿಂದ ಪ್ರಾರಂಭಗೊಂಡು ಕೋಲ್ಸ್‌ಪಾರ್ಕ್ ಜಂಕ್ಷನ್‌ನಲ್ಲಿ ಕೊನೆಗೊಳ್ಳುತ್ತದೆ. ಈ ರಸ್ತೆಯಲ್ಲಿ ದ್ವಿಮುಖ ಸಂಚಾರ ವ್ಯವಸ್ಥೆ ಇದ್ದು, ಕೋಲ್ಸ್‌ಪಾರ್ಕ್ ಜಂಕ್ಷನ್‌ನಿಂದ ಸ್ಯಾಂಡರ್ಸ್ ರಸ್ತೆ ಮತ್ತು ಪ್ರಾಮಿನೆಡೆ ರಸ್ತೆ ಜಂಕ್ಷನ್ ವರೆಗೆ ದಕ್ಷಿಣದಿಂದ ಉತ್ತರಕ್ಕೆ ಸಂಚರಿಸುವ ಸಂಚಾರವನ್ನು ಯಥಾಸ್ಥಿತಿಯಲ್ಲಿ ಉಳಿಸಿಕೊಂಡು ಪ್ರಾಮಿನೆಡೆ ರಸ್ತೆ ಮತ್ತು ಸ್ಯಾಂಡರ್ಸ್ ರಸ್ತೆ ಜಂಕ್ಷನ್‌ನಿಂದ ಸೆಂಟ್ ಜಾನ್ಸ್ ಚರ್ಚ್ ರಸ್ತೆ ಮತ್ತು ಸ್ಯಾಂಡರ್ಸ್ ರಸ್ತೆ ಜಂಕ್ಷನ್ (ಕೋಲ್ಸ್‌ಪಾರ್ಕ್ ಜಂಕ್ಷನ್) ವರೆಗೆ ಉತ್ತರದಿಂದ ದಕ್ಷಿಣಕ್ಕೆ ಸಂಚರಿಸುವ ಸಂಚಾರವನ್ನು ನಿಷೇಧಿಸಿದೆ. ಈ ರಸ್ತೆಯಲ್ಲಿ ಕೋಲ್ಸ್ ರಸ್ತೆಯಲ್ಲಿ ಬರುವ ಸಂಚಾರವನ್ನು ಪ್ರಾಮಿನೆಡೆ ರಸ್ತೆ ಮತ್ತು ಸ್ಯಾಂಡರ್ಸ್ ರಸ್ತೆ ಜಂಕ್ಷನ್‌ನಲ್ಲಿ ನಿರ್ಬಂಧಿಸಿ ಬಲ ಅಥವಾ ಎಡ ತಿರುವು ಪಡೆದುಕೊಂಡು ಪ್ರಾಮಿನೆಡೆ ರಸ್ತೆಯಲ್ಲಿ ಸಾಗಿ ಹೇನ್ಸ್ ರಸ್ತೆ ಮತ್ತು ಸೆಂಟ್ ಜಾನ್ಸ್ ಚರ್ಚ್ ರಸ್ತೆಗೆ ಸೇರಲು ಅವಕಾಶ ಕಲ್ಪಿಸಿದೆ.

ಅಂತೆಯೇ ಕಲಂ 116 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 4 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮೇಲ್ಕಂಡ ನಿರ್ಬಂಧನೆಯನ್ನು ಜಾರಿಗೊಳಿಸಲು ಬೇಕಾದ ಅಗತ್ಯ ಸೂಚನಾ ಫಲಕಗಳನ್ನು ಸೂಕ್ತ ಸ್ಥಳಗಳಲ್ಲಿ ಅಳವಡಿಸಲು ಸ್ಥಳೀಯ ಅಧಿಕಾರಿಗಳಿಗೆ ಆದೇಶಿಸಿರುತ್ತೇನೆ.

ಈ ಮೇಲ್ಕಂಡ ವ್ಯವಸ್ಥೆಯನ್ನು ದಿನಾಂಕ: 22.07.2004 ರಿಂದ ಜಾರಿಗೆ ಬರುವಂತೆ ಆದೇಶಿಸಿರುತ್ತೇನೆ.

ಈ ಆದೇಶವನ್ನು ನಾನು ಈ ದಿನ ಅಂದರೆ ದಿನಾಂಕ: 22.07.2004ರಂದು ನನ್ನ ಸಹಿ ಮತ್ತು ಮುದ್ರೆಯೊಂದಿಗೆ ನೀಡಿರುತ್ತೇನೆ.

ಎಸ್. ಮರಿಸ್ವಾಮಿ
ಪೊಲೀಸ್ ಕಮೀಷನರ್, ಬೆಂಗಳೂರು ನಗರ.

ಪಿ.ಆರ್. 1089

## ASSISTANT COMMISSIONER OF COMMERCIAL TAXES, DIST. 2ND ADDL. CIRCLE, BANGALORE

## TO WHOM SO EVER IT MAY CONCERN

**T.No-148/04-05, Dated:24th July, 2004**

I Sri S.J. Harishkumar Malhotra, Assistant Commissioner of Commercial Taxes, Dist. Addl. Circle-II, Bangalore Division, Bangalore, do hereby declare that the 'C' forms bearing Nos. L. 017021 to L. 017024 (four numbers) as invalid. In case if any body traces them, the same may be returned to the undersigned. This is for the general public to note.

Bangalore
Date:

**S.J. HARISHKUMAR MALHOTRA**
Asst. Commissioner of Comml. Taxes, Dist.
2nd Addl. Circle, Bangalore.

PR-1090

## ಮಾನ್ಯ ಸಿ.ಎಂ.ಎಂ. ಮುಖ್ಯ ಮಹಾನಗರ ದಂಡಾಧಿಕಾರಿಯವರ ನ್ಯಾಯಾಲಯದ ಕಛೇರಿ, ಬೆಂಗಳೂರು ನಗರ

## ಅಧಿಸೂಚನೆ

**ವಿಷಯ :** ವಾರಸುದಾರರಿಲ್ಲದಿರುವ ವಾಹನಗಳನ್ನು ಪೊಲೀಸ್ ಇನ್ಸ್‌ಪೆಕ್ಟರ್ ಆರ್.ಟಿ.ನಗರ ಪೊಲೀಸ್ ಠಾಣೆ ರವರು ವಿಲೇವಾರಿ ಮಾಡುವ ಬಗ್ಗೆ.

**ಉಲ್ಲೇಖ :** ಪೊಲೀಸ್ ಇನ್ಸ್‌ಪೆಕ್ಟರ್, ಆರ್.ಟಿ.ನಗರ ಪೊಲೀಸ್ ಠಾಣೆ ರವರ ವರದಿ ದಿನಾಂಕ: 23.07.2004 ಸಿಮಿಸ್ ನಂ. ಘನ ಮುಖ್ಯ ಮಹಾನಗರ ದಂಡಾಧಿಕಾರಿಯವರ ನ್ಯಾಯಾಲಯ, ಬೆಂಗಳೂರು.

ಈ ಮೂಲಕ ಸಾರ್ವಜನಿಕರಿಗೆ ತಿಳಿಸುವುದೇನೆಂದರೆ, ಈ ಕೆಳಕಂಡ ವಾಹನಗಳನ್ನು ಆರ್.ಟಿ. ನಗರ ಪೊಲೀಸ್ ಠಾಣೆಯಲ್ಲಿ ಅಮಾನತ್ತು ಪಡಿಸಲಾಗಿದ್ದು, ಅವುಗಳಿಗೆ ವಾರಸುದಾರರು ಇರುವುದಿಲ್ಲ ಎಂದು ಪೊಲೀಸ್ ಇನ್ಸ್‌ಪೆಕ್ಟರ್, ಆರ್.ಟಿ.ನಗರ ಪೊಲೀಸ್ ಠಾಣೆಯವರು ವರದಿ ಮಾಡಿರುತ್ತಾರೆ. ಸದರಿ ಮಾಲುಗಳಿಗೆ ವಾರಸುದಾರರು ಯಾರಾದರೂ ಇದ್ದಲ್ಲಿ ಅವರುಗಳು ಪೂರ್ಣ ಮಾಹಿತಿಯೊಂದಿಗೆ ತಮ್ಮ ವಾರಸುದಾರಿಕೆಯನ್ನು ಈ ವಿಷಯ ರಾಜ್ಯ ಪತ್ರದಲ್ಲಿ ಪ್ರಕಟಣೆಗೊಂಡ ದಿನಾಂಕದಿಂದ 30 ದಿನಗಳ ಒಳಗಾಗಿ ರುಜುವಾತುಪಡಿಸಿ ತಮ್ಮ ಮಾಲುಗಳನ್ನು ಪಡೆಯಬಹುದಾಗಿದೆ. ತಪ್ಪಿದ್ದಲ್ಲಿ ಸದರಿ ಮಾಲುಗಳನ್ನು ಮುಟ್ಟುಗೋಲು ಹಾಕಲಾಗಿರುತ್ತದೆ ಎಂದು ಆದೇಶಿಸಿರುತ್ತದೆ. ರಾಜ್ಯ ಪತ್ರದಲ್ಲಿ ಪ್ರಕಟಣೆಗೊಂಡ ದಿನಾಂಕ ದಿಂದ 30 ದಿನಗಳ ನಂತರ ಆದಷ್ಟು ಶೀಘ್ರದಲ್ಲಿ ಪೊಲೀಸ್ ಇನ್ಸ್‌ಪೆಕ್ಟರ್, ಆರ್.ಟಿ. ನಗರ ಪೊಲೀಸ್ ಠಾಣೆ ರವರು ಸದರಿ ಮಾಲುಗಳನ್ನು ಹರಾಜಿನ ಮೂಲಕ ವಿಲೇವಾರಿ ಮಾಡಿ ಅದರಲ್ಲಿ ಬಂದ ಹಣವನ್ನು ಹುಜೂರು ಖಜಾನೆಗೆ ಸಂದಾಯ ಮಾಡಲು ಆದೇಶಿಸಿರುತ್ತದೆ.

| ಕ್ರ. ಸಂ. | ಸಿಮಿಸ್ ನಂ. | ಪಿ.ಎಫ್. ನಂ. | ಅಮಾನತ್ತು ಪಡಿಸಿದ ದಿನಾಂಕ | ವಾಹನದ ನಂ. | ನೊ. ಸಂಖ್ಯೆ | ಬಣ್ಣ | ಇಂಜಿನ್ ನಂ. | ಚಾರ್ಸಿ ನಂ. |
|---|---|---|---|---|---|---|---|---|
| 1. | 544/02 | 93/02 | 02.10.03 | ಸಿಡಿ 100 ಹಿರೋ ಹೊಂಡಾ | ಕೆಎ-02 ಜೆ-518 | ಕೆಂಪು | ಜಿಐ 0ಇ 488839 | ಜಿ 0ಎಫ್ 464206 |
| 2. | 586/03 | 140/03 | 25.11.03 | ಕೈನೆಟಿಕ್ ಸ್ವಿಂಗ್ | ಸಿಎವೈ 7602 | ಕೆಂಪು | ಇಲ್ಲಾ | ಹೆಚ್ಎಂ 01711 |
| 3. | 596/03 | 146/03 | 03.12.03 | ಟಿವಿಎಸ್ ಎಕ್ಸ್ಎಲ್ 50 | ಸಿಎಒ 2800 | ಹಸಿರು | 3713 ಇ 2128 | ಇಲ್ಲಾ |
| 4. | 598/03 | 147/03 | 04.12.03 | ಬಜಾಜ್ ಚೇತಕ್ | ಸಿಇಎಕ್ಸ್ 4637 | ನೀಲಿ | ವಿಸಿಇ 414799 | ಒಎಸ್ಇ 383858 |
| 5. | 599/03 | 148/03 | 04.12.03 | ಬಜಾಜ್ ಪ್ರೀಯಾ ಸ್ಕೂಟರ್ | ಕೆಎ-04 6969 | ನೀಲಿ | ಇ04 ಬಿಎ 674688 | |
| 6. | 600/03 | 149/03 | 04.12.03 | ಬಜಾಜ್ ಚೇತಕ್ | ಇಟಿಎಲ್ 2287 | ಸಿಮೆಂಟ್ | 064 ಇ 8006124755 | 0608 ಯು 5103185 |
| 7. | 605/03 | 150/03 | 08.12.03 | ಯಜ್‌ಡಿ | ಎಂವೈಸಿ 7386 | ಕಪ್ಪು | ಐಜೆಬಿ 250132691 | 132691 132210 |
| 8. | 606/03 | 151/03 | 08.12.03 | ಟಿವಿಎಸ್ ಎಕ್ಸ್ಎಲ್ | ಕೆಎ-02 ಆರ್ 3351 | ಹಸಿರು | ಎ601 ಎಂ 256128 | ಎ601 ಎಫ್ 273716 |
| 9. | 610/03 | 153/03 | 09.12.03 | ಲೂನಾ | ಕೆಎ-05 ಇ 5201 | ನೀಲಿ | 31033552 | ಇಲ್ಲಾ |
| 10. | 611/03 | 154/03 | 09.12.03 | ಲೂನಾ | ಸಿಕೆಎನ್ 124 | ಕಾಫೀ | 12003269 | ಇಲ್ಲಾ |

ಮುಖ್ಯ ಮಹಾನಗರ ದಂಡಾಧಿಕಾರಿ,
ಬೆಂಗಳೂರು ನಗರ.

ಪಿ.ಆರ್. 1091

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು**

**ಅಧಿಸೂಚನೆ**

**ಸಂಖ್ಯೆ:ಎಲ್.ಆರ್.ಎಫ್/ಸಿಆರ್:13:03-04, ಬೆಂಗಳೂರು, ದಿನಾಂಕ:12ನೇ ಜುಲೈ, 2004**

**ವಿಷಯ :** ಪೀಪಲ್ ಟ್ರೀ ನಂ. 139/7, ದೊಮ್ಮಲೂರು ಲೇಔಟ್, ಬೆಂಗಳೂರು-71 ಸಂಸ್ಥೆ ಬೆಂಗಳೂರು ದಕ್ಷಿಣ ತಾಲ್ಲೂಕು, ಉತ್ತರಹಳ್ಳಿ ಹೋಬಳಿ, ಉತ್ತರಿ ಗ್ರಾಮದ ಸ.ನಂ. 71/3 69/1, 71/2.111/6 ರಲ್ಲಿ 7-17 ಎಕರೆ/ ಗುಂಟೆ ಜಮೀನನ್ನು ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಖರೀದಿಸಲು ಅನುಮತಿ ಕೋರಿರುವ ಬಗ್ಗೆ.

ಪೀಪಲ್ ಟ್ರೀ ನಂ. 139/7, ದೊಮ್ಮಲೂರು ಲೇಔಟ್, ಬೆಂಗಳೂರು-71 ಸಂಸ್ಥೆ ಇವರು ಬೆಂಗಳೂರು ದಕ್ಷಿಣ ತಾಲ್ಲೂಕು ಉತ್ತರಹಳ್ಳಿ ಹೋಬಳಿ, ಉತ್ತರಿ ಗ್ರಾಮದ ಸರ್ವೆ ನಂ. 71/3 69/1.71/2.111/6 ರಲ್ಲಿ 7-17ಎಕರೆ/ ಗುಂಟೆ ಜಮೀನನ್ನು ಶೈಕ್ಷಣಿಕ ಮತ್ತು ಚಾರಿಟೇಬಲ್ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ. 109 ರಡಿ ಖರೀದಿಸಲು ಮಾಡಿರುವ ಬೇಡಿಕೆ ಹಾಗೂ ನಮೂನೆ-15ಎ ಮತ್ತು ನಮೂನೆ-15 ಎಎ ರಲ್ಲಿ ನೀಡಿದ ಮಾಹಿತಿ ಅನುಸರಿಸಿ ತಹಶೀಲ್ದಾರ್, ಬೆಂಗಳೂರು ದಕ್ಷಿಣ ತಾಲ್ಲೂಕು ರವರ ಪತ್ರ ಸಂಖ್ಯೆ: ಎಲ್.ಆರ್.ಎಫ್: 109: ಸಿ.ಆರ್:9/03-04 ದಿನಾಂಕ: 16.02.2004ರಲ್ಲಿ ಪ್ರಸ್ತಾಪಿತ ಗ್ರಾಮದ ಸರ್ವೆ ನಂಬರ್ 71/3 69/1.71/2.111/ 6 ರಲ್ಲಿ 7-17 ಎಕರೆ/ ಗುಂಟೆ ಜಮೀನನ್ನು ಖರೀದಿಸಲು ಸದರಿ ಸಂಸ್ಥೆಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109(1)(11) ರಡಿ ವಿನಾಯ್ತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಸಂಸ್ಥೆಯು ಉಪ ನೊಂದಣಾಧಿಕಾರಿಗಳು ಕಛೇರಿ ಶಿವಾಜಿನಗರ ಉಪ ನೊಂದಣಾ ಕಛೇರಿಯಲ್ಲಿ ದಿನಾಂಕ:21.02.1984ರಂದು ನೊಂದಾಯಿಸಲ್ಪಟ್ಟಿದೆ. ಖಾತೆದಾರರಿಂದ ಜಮೀನು ಖರೀದಿಸಲು ಒಪ್ಪಂದ ಕರಾರು ಪತ್ರ ಮಾಡಿಕೊಂಡಿರುತ್ತಾರೆ.

ಪ್ರಸ್ತಾಪಿತ ಜಮೀನು ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್.) ಕಾಯ್ದೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109ರ ಪ್ರಕಾರ ಶೈಕ್ಷಣಿಕ ಮತ್ತು ಚಾರಿಟೇಬಲ್ ಉದ್ದೇಶಕ್ಕೆ 4 ಯುನಿಟ್‌ಗಳವರೆಗೆ ಜಮೀನು ಹೊಂದಲು ಅವಕಾಶ ಕಲ್ಪಿಸಿದೆ. ಈ ಪ್ರಸ್ತಾವನೆ ಕರ್ನಾಟಕ ತಿದ್ದುಪಡಿ ಕಾಯ್ದೆ 1995ರ ಪ್ರಕಾರ ಕಲಂ 109

(1) (11) ಮತ್ತು ಕರ್ನಾಟಕ ಭೂ ಸುಧಾರಣೆ ತಿದ್ದುಪಡಿ ಕಾಯಿದೆ 1961 ಕಲಂ. 63, 79ಎ, 79ಬಿ ಅಥವಾ 80ಕ್ಕೆ ವಿನಾಯ್ತಿ ನೀಡಿ ಬೆಂಗಳೂರು ದಕ್ಷಿಣ ತಾಲ್ಲೂಕು, ಉತ್ತರಹಳ್ಳಿ ಹೋಬಳಿ, ಉತ್ತರಿ ಗ್ರಾಮದ ಮೇಲ್ಕಂಡ ಸರ್ವೆ ನಂಬರ್ 71/3 69/1.71/2.111/6ರಲ್ಲಿ 7-17ಎಕರೆ/ ಗುಂಟೆ ಜಮೀನನ್ನು ಪೀಪಲ್ ಟ್ರೀ ನಂ.139/7, ದೊಮ್ಮಲೂರು ಲೇಔಟ್, ಬೆಂಗಳೂರು-71 ಸಂಸ್ಥೆ ಉತ್ತರಿ ಗ್ರಾಮದ ರವರಿಗೆ ಶೈಕ್ಷಣಿಕ ಮತ್ತು ಚಾರಿಟೇಬಲ್ ಉದ್ದೇಶಕ್ಕಾಗಿ ಖರೀದಿಸಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ಕಲಂ. 109(1) (11) ರಡಿ ಹಾಗೂ ಸರ್ಕಾರದ ತಿದ್ದುಪಡಿ ಅಧಿಸೂಚನೆ ಸಂಖ್ಯೆ: ಶಾಇ 47 ಶಾಸನ 2001 ಬೆಂಗಳೂರು ದಿನಾಂಕ:23.04.2003ರಂತೆ ಶೈಕ್ಷಣಿಕ ಮತ್ತು ಚಾರಿಟೇಬಲ್ ಉದ್ದೇಶಕ್ಕೆ 2 ಯುನಿಟ್‌ಗಳಿದ್ದು ಜಮೀನನ್ನು ಹೊಂದಲು ಅವಕಾಶ ಕಲ್ಪಿಸಿದೆ. ಈ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಅನುಮತಿ ನೀಡಿದೆ.

**ಷರತ್ತುಗಳು**

1) ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷದೊಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು ಮತ್ತು ಈ ಬಗ್ಗೆ ತಹಶೀಲ್ದಾರ್ ರವರ ಮೂಲಕ ಈ ಕಛೇರಿಗೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2) ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯಿದೆ 1995 ಕಲಂ 3ರಲ್ಲಿ ಹೇಳಿರುವಂತೆ, ಶೇ. 55 ಪೆಯಿಡ್ ಆಫ್ ಷೇರು ಬಂಡವಾಳ ಹೊಂದಿರುವ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ಸಂಘ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ಬೇರೆ ರೀತಿ ವರ್ಗಾಯಿಸಬಾರದು.
3) ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯಿದೆ 1964ರ ಕಲಂ 95ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯಬೇಕು.
4) ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ ಸಿಡಿಪಿ, ಒಡಿಪಿ ಹಾಗೂ ಹಸಿರು ವಲಯ ವ್ಯಾಪ್ತಿಯೊಳಗೆ ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸಿಕೊಳ್ಳತಕ್ಕದ್ದು.
5) ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾದ ಅನುಮತಿಯನ್ನು ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣ ಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಲಾಗುವುದು.
6) ಈ ಅನುಮತಿ ಭೂ ಸುಧಾರಣೆ ಕಾಯಿದೆ 1961ರ ಕಲಂ 109ರನ್ವಯ ಮಾತ್ರ ಮಾಡಿರುತ್ತದೆ. ಬೇರೆ ಕಾನೂನುಗಳಿಗೆ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.
7) ಸದರಿ ಜಮೀನಿನ ಬಗ್ಗೆ ಯಾವುದೇ ಗೇಣಿ ಅರ್ಜಿ ಇದ್ದರೆ ಅದು ಭೂ ನ್ಯಾಯ ಮಂಡಳಿಯ ತೀರ್ಪಿಗೆ ಒಳಪಟ್ಟಿರುತ್ತದೆ ಎಂಬ ಷರತ್ತಿಗೆ ಒಳಪಡಿಸಿದೆ.

ವಿಶೇಷ ಜಿಲ್ಲಾಧಿಕಾರಿಗಳು (ಕಂ),
ಬೆಂಗಳೂರು ಜಿಲ್ಲೆ.

ಪಿ.ಆರ್. 1092

**ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಅಧಿಕಾರಿಗಳ ಕಛೇರಿ, ತುಮಕೂರು**

**ಪ್ರಕಟಣೆ**

**ಸಂಖ್ಯೆ: ಬಿಸಿಎಂ-2:ಮಅ:ಕಾತ:ಸಿಆರ್-19:04-05, ದಿನಾಂಕ: 16ನೇ ಜುಲೈ, 2004**

**ವಿಷಯ :** 2004-05ನೇ ಸಾಲಿಗೆ ಮತೀಯ ಅಲ್ಪಸಂಖ್ಯಾತರ ಕಾನೂನು ಪದವೀಧರರಿಗೆ ತರಬೇತಿ ನೀಡುವ ಬಗ್ಗೆ.

ತುಮಕೂರು ಜಿಲ್ಲೆಯ ಮತೀಯ ಅಲ್ಪಸಂಖ್ಯಾತರ ಕಾನೂನು ಪದವೀಧರರಿಗೆ 2004-05ನೇ ಸಾಲಿನಲ್ಲಿ ವಕೀಲ ವೃತ್ತಿಯಲ್ಲಿ ತರಬೇತಿ ನೀಡಲು ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಲಾಗಿದೆ. ಮತೀಯ ಅಲ್ಪಸಂಖ್ಯಾತರು ಕಾನೂನು ಪದವೀಧರರು ಈ ಕೆಳಕಂಡ ನಿಬಂಧನೆಗಳಿಗೊಳಪಟ್ಟು ಅರ್ಜಿ ಸಲ್ಲಿಸಬಹುದು. ಅರ್ಜಿಯನ್ನು ತುಮಕೂರು ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಕಛೇರಿಯಲ್ಲಿ ಕಛೇರಿ ಕೆಲಸದ ವೇಳೆಯಲ್ಲಿ ಪಡೆಯಬಹುದು. ಅವಶ್ಯಕ ದಾಖಲಾತಿಗಳೊಂದಿಗೆ ಭರ್ತಿ ಮಾಡಿದ ಅರ್ಜಿಗಳನ್ನು ಸ್ವೀಕರಿಸಲು ಕೊನೆಯ ದಿನಾಂಕ: 31.08.2004.

**ನಿಬಂಧನೆಗಳು:**

1. ಕಾನೂನು ಪದವಿ ಪರೀಕ್ಷೆ ಪಾಸು ಮಾಡಿದ ಮತೀಯ ಅಲ್ಪಸಂಖ್ಯಾತರ ಅಭ್ಯರ್ಥಿಯಾಗಿರಬೇಕು (ಮುಸ್ಲಿಂ, ಕ್ರಿಶ್ಚಿಯನ್, ಬೌದ್ಧರು, ಜೈನರು, ಪಾರ್ಸಿ, ಸಿಖ್, ವಕೀಲ ವೃತ್ತಿ ಅಭ್ಯಾಸಕ್ಕೆ ನಿಗದಿಪಡಿಸಿದ ವಿದ್ಯಾರ್ಹತೆ ಹೊಂದಿರಬೇಕು)
2. ಕಾನೂನು ಪದವಿಯ ಪರೀಕ್ಷೆಯನ್ನು ಪಾಸು ಮಾಡಿರುವುದು ಅರ್ಜಿಯನ್ನು ಸ್ವೀಕರಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕಕ್ಕೆ ಎರಡು ವರ್ಷಗಳ ಅವಧಿಯೊಳಗಿರಬೇಕು.
3. ಸರ್ಕಾರ ನಿಗದಿಪಡಿಸುವ ನಮೂನೆಯಲ್ಲಿ ಜಾತಿ ಆದಾಯ ದೃಢೀಕರಣ ಪತ್ರ ಸಲ್ಲಿಸಬೇಕು. ವಾರ್ಷಿಕ ಆದಾಯದ ಮಿತಿ ಎಲ್ಲಾ ಮೂಲಗಳಿಂದ ರೂ. 15000 ಗಳನ್ನು ಮೀರಬಾರದು. ಪ್ರವರ್ಗ 1ರಡಿಯಲ್ಲಿ ಬರುವ ಮತೀಯ ಅಲ್ಪಸಂಖ್ಯಾತರಿಗೆ ಆದಾಯದ ಮಿತಿ ಇರುವುದಿಲ್ಲ.
4. ತರಬೇತಿ ಅವಧಿ 4 ವರ್ಷಗಳಾಗಿದ್ದು ಮಾಹೆಯಾನ ರೂ. 1000 ರಂತೆ ತರಬೇತಿ ಭತ್ಯೆ ನೀಡಲಾಗುವುದು.
5. ಈ ಸೌಲಭ್ಯ ಪಡೆಯಲಿಚ್ಛಿಸುವ ಅಭ್ಯರ್ಥಿಯ ವಯೋಮಿತಿ 30 ವರ್ಷ ಮೀರಿರಬಾರದು.

6. ಅಭ್ಯರ್ಥಿಯು ಬಾರ್ ಕೌನ್ಸಿಲ್‌ನಲ್ಲಿ ಹೆಸರನ್ನು ನೊಂದಾಯಿಸಿರಬೇಕು.

ಅವಶ್ಯಕ ದಾಖಲಾತಿಗಳೊಂದಿಗೆ ಭರ್ತಿ ಮಾಡಿದ ಅರ್ಜಿಗಳನ್ನು ಜಿಲ್ಲಾ ಅಧಿಕಾರಿ, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಕಛೇರಿ, ತುಮಕೂರು ರವರಿಗೆ ಸಲ್ಲಿಸತಕ್ಕದ್ದು. ಕೊನೆಯ ದಿನಾಂಕ ಮೀರಿದ ನಂತರ ಬಂದ ಹಾಗೂ ಅಪೂರ್ಣವಾದ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

ಜಿಲ್ಲಾ ಅಧಿಕಾರಿಗಳು, ಹಿಂದುಳಿದ ವರ್ಗಗಳ
ಪಿ.ಆರ್. 1093 ಮತ್ತು ಅಲ್ಪಸಂಖ್ಯಾತರ ಇಲಾಖೆ, ತುಮಕೂರು.

**ಜಿಲ್ಲಾ ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯದಲ್ಲಿ, ಕೊಪ್ಪಳ**

**ಪ್ರಕರಣ ಸಂಖ್ಯೆ: ಕಾಅಕೊ:ಕಾನಪ:220:2004, ದಿನಾಂಕ: 22ನೇ ಜುಲೈ, 2004**

**ಅರ್ಜಿದಾರರು:** ವಿರುದ್ಧ **ಪ್ರತಿವಾದಿಗಳು:**

1. ಈರಮ್ಮ ಗಂಡ ರವಿಕುಮಾರ
2. ಸುದೀಪ ತಂದೆ ರವಿಕುಮಾರ್
3. ಸೂಗಣ್ಣಗೌಡ ತಂದೆ ಸಾರಂಗಗೌಡ
4. ಸರಸ್ವತಮ್ಮ ಗಂಡ ಸೂಗಣ್ಣಗೌಡ
R/o ಕೊಪ್ಪರ ತಾಲ್ಲೂಕು ದೇವದುರ್ಗ ಹಾಲಿ.
ವಸ್ತಿ: ಕಾರಟಗಿ ತಾಲ್ಲೂಕು ಗಂಗಾವತಿ.

1. ದಾವಲಸಾಬ ತಂದೆ ಖಾಜಾಹುಸೇನ
R/o ಕೊಪ್ಪರ, ತಾಲ್ಲೂಕು ದೇವದುರ್ಗ.
2. ಡಿವಿಜನಲ್ ಮ್ಯಾನೇಜರ್ ಯುನೈಟೆಡ್ ಇಂಡಿಯಾ ಇನ್ಸೂರೆನ್ಸ್ ಕಂ.ಲಿ., ರಾಯಚೂರು.

**ಪ್ರಕಟಣೆ**

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ ಮೃತ: ಶ್ರೀ ರವಿಕುಮಾರ ಎಂಬುವವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿರುವಾಗ ದಿನಾಂಕ: 24.11.2003ರಂದು ಕೆಲಸದಿಂದುಂಟಾದ ಅಪಘಾತದಿಂದ ಮೃತ:ಗಾಯ: ಹೊಂದಿರುತ್ತಾರೆ ಎಂದು ವಿವರಿಸುತ್ತಾ ಕಾರ್ಮಿಕ ನಷ್ಟ ಪರಿಹಾರ ಕಾಯ್ದೆ 1923ರಡಿ ಪರಿಹಾರ ಧನಕ್ಕಾಗಿ ಕೋರಿ ಅವಲಂಬಿತ ವಾರಸುದಾರರೆಂದು ಹೇಳಿಕೊಂಡ ಮೃತ: ಗಾಯ: ಅವಲಂಬಿತರಾದ ಶ್ರೀಮತಿ ಈರಮ್ಮ ಹಾಗೂ ಇತರರು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದಕಾರಣ ಈ ಬಗ್ಗೆ ಆಕ್ಷೇಪಣೆ ಇದ್ದಲ್ಲಿ ಅಥವಾ ತಾವೇನಾದರು ಅಥವಾ ತಾವೂ ಸಹ ಮೃತ:ಗಾಯ ಹೊಂದಿದವರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂಥಹವರು ಈ ಪ್ರಕಟಣೆಯನ್ನು ಈ ನ್ಯಾಯಾಲಯದ ಸೂಚನಾ ಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಗೊಂಡ ಅಥವಾ ಸ್ಥಳೀಯ ದಿನಪತ್ರಿಕೆಯಲ್ಲಿ ಪ್ರಕಟಗೊಂಡ 30 ದಿನದೊಳಗಾಗಿ ಆಕ್ಷೇಪಣೆ ಅಥವಾ ಅರ್ಜಿ ಸಲ್ಲಿಸಬಹುದಾಗಿದೆ ಎಂದು ಮತ್ತು ಸದ್ರಿ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಅಥವಾ ಅರ್ಜಿಗಳು ಬಾರದಿದ್ದಲ್ಲಿ ಸದ್ರಿ ಅವಧಿ ಮುಗಿದ ನಂತರ ಮೇಲ್ಕಾಣಿಸಿದ ಅರ್ಜಿದಾರರ ಅರ್ಜಿಯನ್ನೇ ಮುಂದಿನ ವಿಚಾರಣೆಗಾಗಿ ತೆಗೆದುಕೊಳ್ಳಲಾಗುವುದೆಂದು ಈ ಪ್ರಕಟಣೆ ಮೂಲಕ ತಿಳಿಯಪಡಿಸಲಾಗಿದೆ.

ಜಿಲ್ಲಾ ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ
ಪಿ.ಆರ್. 1094 ಪರಿಹಾರ ಆಯುಕ್ತರು, ಕೊಪ್ಪಳ ಜಿಲ್ಲೆ, ಕೊಪ್ಪಳ.

**ಕಾರ್ಮಿಕ ನಷ್ಟ ಪರಿಹಾರಕ್ಕೆ ಆಯುಕ್ತರು ಮತ್ತು ಕಾರ್ಮಿಕ ಅಧಿಕಾರಿ, ಉಡುಪಿ ಜಿಲ್ಲೆ, ಉಡುಪಿ ಇವರ ನ್ಯಾಯಾಲಯದಲ್ಲಿ**

**ಅಧಿಸೂಚನೆ**

**ಸಂಖ್ಯೆ:ಡಬ್ಲ್ಯೂಸಿಎ: ಸಿಆರ್-2:ಎಫ್‌ಸಿ/2004/ 198, ದಿನಾಂಕ: 21ನೇ ಜುಲೈ, 2004**

**ಅರ್ಜಿದಾರರು:** ವಿರುದ್ಧ **ಪ್ರತಿವಾದಿಗಳು:**

1. ಶ್ರೀಮತಿ ಪುಟ್ಟು ಪೂಜಾರ್ತಿ,
ಶೀನ ಪೂಜಾರಿಯವರ ಹೆಂಡತಿ
2. ಶ್ರೀ ಜಯ ಬಿಲ್ಲವ, ಬಿನ್ ಶೀನ ಪೂಜಾರಿ,
3. ಶ್ರೀ ರಾಘವೇಂದ್ರ ಬಿಲ್ಲವ, ಬಿನ್ ಶೀನಪೂಜಾರಿ,
4. ಕು: ಜ್ಯೋತಿ, ಶೀನಪೂಜಾರಿಯವರ ಮಗಳು,
ಹಳಹಳವಿ, ಕಿನಾರಾ ಹೋಟೆಲ್ ಬಳಿ, ಪೋಸ್ಟ್
ಹಂಗ್ಳೂರು, ಕೋಡಿ, ಕುಂದಾಪುರ ತಾಲ್ಲೂಕು.

1. ಶ್ರೀ ರಾಮಚಂದ್ರ ರಾವ್,
S/o ಶ್ರೀನಿವಾಸ ಶೇರೆಗಾರ,
R/o ಶ್ರೀನಿವಾಸ ನಿಲಯ, ಎಲ್.ಎಲ್. ರೋಡ್,
ಪಡೆಕೆರೆ, ಕುಂದಾಪುರ.
2. ನ್ಯಾಷನಲ್ ಇನ್ಸೂರೆನ್ಸ್ ಕಂ.ಲಿ., ಬ್ರಾಂಚ್ ಆಫೀಸ್,
ಕುಂದಾಪುರ, ಗಿರೀಶ್ ಮಹಲ್, ಮೈನ್ ರೋಡ್,
ಕುಂದಾಪುರ.

ಅರ್ಜಿದಾರಳಾದ ಶ್ರೀಮತಿ ಪುಟ್ಟು ಪೂಜಾರ್ತಿ ಇವರು ತಮ್ಮ ಮಗನಾದ ಶ್ರೀ ಅಣ್ಣಪ್ಪ ಬಿಲ್ಲವ ಇವರು ಪ್ರತಿವಾದಿಗಳಾದ ಶ್ರೀ ರಾಮಚಂದ್ರ ರಾವ್, S/o ಶ್ರೀನಿವಾಸ ಶೇರೆಗಾರ, ಪಡುಕೆರೆ, ಕುಂದಾಪುರ ಇವರಲ್ಲಿ ಕೆಲಸಗಾರರಾಗಿದ್ದು, ಕೆಲಸದಲ್ಲಿ ನಿರತರಾಗಿದ್ದಾಗ ದಿನಾಂಕ:05.02.2004 ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ಹೇಳಿ ಆಶ್ರಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದರೆ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ, ಸರ್ಕಾರಿ ರಾಜ್ಯ

ಪತ್ರದಲ್ಲಿ ಪ್ರಕಟಣೆಯಾದಲ್ಲಿನಿಂದ 30 ದಿವಸಗಳ ಒಳಗೆ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೈಮ್ ಅರ್ಜಿ: ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸುವುದೆಂದು ತಿಳಿಸಲಾಗಿದೆ.

**ಎಸ್.ಸಿ. ರಾಮಚಂದ್ರ (ಪ್ರಭಾರ),**
ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ
ಆಯುಕ್ತರು, ಉಡುಪಿ ಜಿಲ್ಲೆ, ಉಡುಪಿ.

ಪಿ.ಆರ್. 1095

**ಬೆಂಗಳೂರು ನಗರ ಘನ 11ನೇ ಎ.ಸಿ.ಎಂ.ಎಂ. ನ್ಯಾಯಾಲಯದ ನ್ಯಾಯಾಧೀಶರವರ ಸನ್ನಿಧಾನಕ್ಕೆ**

**ನಿವೇದನೆ**

ಈ ಮೇಲಿನ ವಿಷಯ ಹಾಗೂ ಉಲ್ಲೇಖನಕ್ಕೆ ಸಂಬಂಧಪಟ್ಟಂತೆ ಘನ ನ್ಯಾಯಾಲಯಕ್ಕೆ ನಿವೇದಿಸುವುದೇನೆಂದರೆ ಶಿವಾಜಿನಗರ ಪೊಲೀಸ್ ಠಾಣೆಯಲ್ಲಿ ಈ ಕೆಳಕಂಡ ಸ್ಕೂಟರ್ ಅನ್ನು ವಶಪಡಿಸಿಕೊಂಡಿದ್ದು ಸದರಿ ಸ್ಕೂಟರ್‌ನ ವಾರಸುದಾರರು ಪತ್ತೆಯಾಗದ ಕಾರಣ ವಾರಸುದಾರರನ್ನು ಪತ್ತೆ ಮಾಡಲು ಬೆಂಗಳೂರು ನಗರದ ಎಲ್ಲಾ ಪೊಲೀಸ್ ಠಾಣೆಗಳಿಗೆ ಸುತ್ತೋಲೆಯನ್ನು ಕಳುಹಿಸಿದ್ದು ವಾರಸುದಾರರು ಯಾರೆಂದು ಪತ್ತೆಯಾಗಿರುವುದಿಲ್ಲ. ಹಾಗೂ ಮಾಲೀಕರನ್ನು ಪತ್ತೆ ಮಾಡಲು ಎಸ್.ಸಿ.ಆರ್.ಬಿ. ಗೆ ವಿವರಗಳನ್ನು ನೀಡಿ ಪರಿಶೀಲಿಸಿದ್ದು ಸದರಿ ಸ್ಕೂಟರ್ ಬಗ್ಗೆ ಬೆಂಗಳೂರು ನಗರದಲ್ಲಿ ಹಾಗೂ ಕರ್ನಾಟಕದಲ್ಲಿ ಕೇಸು ದಾಖಲಾದ ಬಗ್ಗೆ ಮಾಹಿತಿ ದೊರೆತಿರುವುದಿಲ್ಲ. ಆದ್ದರಿಂದ ಈ ಸ್ಕೂಟರ್ ಅನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಈ ಕೆಳಕಂಡ ವಿವರಗಳನ್ನು ಸಾರ್ವಜನಿಕರ ಮಾಹಿತಿಗಾಗಿ ಪ್ರಕಟಿಸಲಾಗಿದೆ.

| ಕ್ರ. ಸಂ. | ಸೀಮಿಸ್ ನಂ. ಮತ್ತು ಮೊ.ನಂ. | ಪಿ.ಎಫ್.ನಂ. | ವಶಪಡಿಸಿಕೊಂಡಿರುವ ಮಾಲಿನ ವಿವರ |
|---|---|---|---|
| 1. | ಸೀಮಿಸ್ ನಂ. 237/03 | 55/03 ದಿನಾಂಕ: 17.10.03 | ಒಂದು ಬಜಾಜ್ ಸ್ಕೂಟರ್ ನಂ. ಸಿ.ಕೆ.ಇ-9965,<br>ಇಂಜಿನ್ ನಂ. 03-ಇ-311115360<br>ಚಾಸಿಸ್ ನಂ. 03-ಸಿ-311116538 |

ಸಬ್‌ಇನ್ಸ್‌ಪೆಕ್ಟರ್ ಆಫ್ ಪೊಲೀಸ್,
ಶಿವಾಜಿನಗರ ಪೊಲೀಸ್ ಠಾಣೆ, ಬೆಂಗಳೂರು-51.

ಪಿ.ಆರ್. 1096

**ದಂಡಾಧಿಕಾರಿಗಳು, 6ನೇ ಎಸಿಎಂಎಂ ನ್ಯಾಯಾಲಯ, ಬೆಂಗಳೂರು ನಗರ**

ಈ ಮೂಲಕ ಸಾರ್ವಜನಿಕರಲ್ಲಿ ತಿಳಿಯಪಡಿಸುವುದೇನೆಂದರೆ ಈ ಕೆಳಕಂಡ ಮಾಲುಗಳನ್ನು ಎಸ್.ಆರ್. ನಗರ ಪೊಲೀಸ್ ಠಾಣೆಯಲ್ಲಿ ಅಮಾನತ್ತುಪಡಿಸಿದ್ದು ವಾರಸುದಾರರು ಇರುವುದಿಲ್ಲ. ಸದರಿ ಮಾಲುಗಳ ವಾರಸುದಾರರು ಇದ್ದಲ್ಲಿ ಅವರು ತಮ್ಮ ವಾರಸುದಾರಿಕೆಯನ್ನು ಈ ವಿಷಯ ಪ್ರಕಟಗೊಂಡ 30 ದಿನಗಳ ಒಳಗಾಗಿ ನ್ಯಾಯಾಲಯದಲ್ಲಿ ರುಜುವಾತುಪಡಿಸಿ ತಮ್ಮ ಮಾಲುಗಳನ್ನು ಪಡೆಯಬಹುದಾಗಿದೆ.

| ಕ್ರ.ಸಂ. | ಮೊ.ಸಂ. ಮತ್ತು ಕಲಂ | ಪಿ.ಎಫ್. ನಂ. | ಅಮಾನತ್ತುಪಡಿಸಿದ ಮಾಲಿನ ವಿವರ |
|---|---|---|---|
| 1. | ಸಿಮಿಸ್ ನಂ. 121/04 | 18/2004 | ಒಂದು ಬಜಾಜ್ ಕ್ಯಾಲಿಬರ್ ಮೋಟಾರ್ ಸೈಕಲ್ ನಂ. ಎಪಿ-28-ಎನ್-717<br>ಇಂಜಿನ್ ನಂ.DDMBFF91793<br>ಚಾರ್ಸಿ ನಂ. DDFBFF69678 |
| 2. | ಸಿಮಿಸ್ ನಂ. 129/04 | 19/2004 | ಒಂದು ಬಜಾಜ್ ಚೇತಕ್ ಸ್ಕೂಟರ್ ನಂ.ಸಿಕೆಹೆಚ್-5750<br>ಇಂಜಿನ್ ನಂ.DDMBFF91793<br>ಚಾರ್ಸಿ ನಂ. DDFBFF69678 |
| 3. | ಸಿಮಿಸ್ ನಂ. 130/04 | 20/2004 | ಒಂದು ಬಜಾಜ್-150 ಸ್ಕೂಟರ್ ನಂ.ಸಿಎಕ್ಯೂ-125<br>ಇಂಜಿನ್ ನಂ.03B-708-350915<br>ಚಾರ್ಸಿ ನಂ. 06B708-33495 |
| 4. | ಸಿಮಿಸ್ ನಂ. 132/04 | 21/2004 | ಒಂದು ಬಜಾಜ್ ಚೇತಕ್ ಸ್ಕೂಟರ್ ನಂ.ಸಿಎನ್‌ಪಿ-1708<br>ಇಂಜಿನ್ ನಂ. 10B0SO-949<br>ಚಾರ್ಸಿ ನಂ. 10C052205 |

**ವಿ.ವಿ. ಮಲ್ಲಾಪುರ**
ದಂಡಾಧಿಕಾರಿಗಳು 6ನೇ ಎಸಿಎಂಎಂ ನ್ಯಾಯಾಲಯ,
ಬೆಂಗಳೂರು ನಗರ.

ಪಿ.ಆರ್. 1097

**SUB-INSPECTOR OF POLICE (CRIME) BANASAWADI POLICE STATION, BANGALORE-560084**
**THE LIST OF UNCLAIMED PROPERTIES ARE LYING IN BANASAWADI POLICE STATION FROM 1997 TO 2004 WHICH HAVE BEEN SEIZED IN THE FOLLOWING CRIME CASES**

| Sl.No. | Cr. No. | P.F. No. | Item No. | Details of the Property |
|---|---|---|---|---|
| 1. | 488/1997 | 47/1997 | | Luna Moped No. KA-30-J-3806<br>Eng. No.540411245<br>Cha. No. 52014408 |
| 2. | 281/1998 | 10/1998 | | Hero Honda Motor Cycle No. CTQ-6318 |
| 3. | 438/1996 | 28/2000 | | Suzuki M/c No. KA-03-E-2621<br>Eng. No. 7501-M-520602<br>Cha. No.7510-M-477916 |
| 4. | 607/2001<br>607/2001 | 31/2001<br>31/2001 | 01<br>02 | Suzuki M/c<br>Hero Honda M/c |
| 5. | 02/2002 | 02/2002 | | 1. One Computer Laptap<br>2. One Mobile Phone. |
| 6. | 30/2002 | 03/2003 | | Yamaha Motor Cycle No. CKO-2741<br>Eng. No. ILI-0109167<br>Cha. No. ILI-0109167 |
| 7. | 30/2002 | 06/2003 | | Maruthi 800 Car No. DL-3CE-4835<br>Eng No. F-81-3-IL-9258<br>Cha. No. SB-308164973 |
| 8. | 317/2003 | 47/2003 | | Hero Puch Moped |
| 9. | 317/2003 | 49/2003 | | 1. Suzuki Motor Cycle<br>2. Yamaha Motor Cycle |
| 10. | 317/2003 | 51/2003 | | Hero Honda CD-100 M/c |
| 11. | 317/2003 | 52/2003 | | Kinetic Honda |
| 12. | 317/2003 | 53/2003 | | Hero Honda CD-100 Motor Cycle |
| 13. | 317/2003 | 55/2003 | | 1. TVS Champ<br>2. TVS-50 |
| 14. | 317/2003 | 56/2003 | | Suzuki Motor Cycle |
| 15. | 317/2003 | 57/2003 | | Bajaj RTZ-KB-100 Motor Cycle |
| 16. | 317/2003 | 58/2003 | | Kinetic Honda |
| 17. | 31/2003 | 59/2003 | | 1. TVS-Suzuki Motor Cycle<br>2. Bajaj Kawasaki Motor Cycle |
| 18. | 453/2002 | 87/2002 | | 1. Hercules Top Gear Cycle<br>2. Hero Cycle. |
| 19. | 11/2003 | 22/2003 | | One Car Stereo |
| 20. | 11/2003 | 23/2003 | | One Car Stereo |
| 21. | 331/2003 | 68/2003 | | 1. One Gold Bangle 15GM.<br>2. One Pair Gold Kamal 10GM.<br>3. One Pair Gold Kamal 10 GM<br>4. One Pair Gold Karimani Chain 15GM |
| 22. | 331/2003 | 69/2003 | | 1. One Sony Video Camera<br>2. One Sony Digital Camera<br>3. One Casio Digital Diary<br>4. One Computer Laptop. |
| 23. | 117/2003 | 39/2003 | | 1. One Computer Monitor<br>2. One C.P.U.<br>3. One Key Board. |
| 24. | 24/2004 | 03/2004 | | RX-Yamaha Motor Cycle<br>Eng. No. ILI-017531<br>Cha. No. ILI-017531 |
| 25. | 24/2004 | 05/2004 | | RX-Yamaha Motor Cycle. |
| 26. | 32/2004 | 07/2004 | | Hero Honda CBZ-Motor Cycle KA-01-R-3416<br>Eng. No. 99-K-40-M-03931<br>Cha. No. 99-L-45-C-00100 |

PR-1098

Sub Inspector of Police (Crime)
Banasawadi Police Station, Bangalore-560 084.

## ಅಬಕಾರಿ ಇಲಾಖೆ

## ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ರವರ ಕಛೇರಿ, ಕೊಡಗು ಜಿಲ್ಲೆ, ಮಡಿಕೇರಿ

## ಪ್ರಕಟಣೆ

**ನಂ.ಇಎಕ್ಸ್‌ಇ:3:ಡಿಟಿಸಿಆರ್‌ಎಂ:/2000-01, ದಿನಾಂಕ: 24ನೇ ಜುಲೈ, 2004**

**ವಿಷಯ :** ಕೊಡಗು ಜಿಲ್ಲೆಯಲ್ಲಿನ ಅಬಕಾರಿ ಪ್ರಕರಣದಲ್ಲಿ ವಶಪಡಿಸಿಕೊಂಡ ವಾಹನಗಳ ವಿಲೇವಾರಿ ಬಗ್ಗೆ ಸರ್ಕಾರಿ ಪತ್ರದಲ್ಲಿ ಪ್ರಕಟಿಸುವ ಬಗ್ಗೆ.

**ಉಲ್ಲೇಖ :** ಮುಟ್ಟುಗೋಲು ಹಾಕಿಕೊಳ್ಳಬೇಕಾದ ವಾಹನಗಳ ಸಂಖ್ಯೆ:

1. ಅಂಬಾಸಿಡರ್ ಕಾರ್ ನಂ.ಸಿ.ಆರ್.ಯು. 9378
2. ಅಂಬಾಸಿಡರ್ ಕಾರ್ ನಂ. ಕೆ.ಆರ್.ಕೆ. 7701
3. ಮಿನಿ ಲಾರಿ ನಂ. ಕೆ.ಎಲ್-7 ಕೆ. 36
4. ಅಂಬಾಸಿಡರ್ ಕಾರ್ ನಂ. ಎಂ.ಇ.ಜಿ. 1854
5. ಆಟೋ ನಂ.ಎಂ.ವೈ.ಝಡ್. 6800
6. ಆಟೋ ನಂ. ಕೆ.ಎ. 12-2680
7. ಮಾರುತಿ 800 ನಂ. ಕೆ.ಎ. 03-ಎಂ.7042
8. ಅಂಬಾಸಿಡರ್ ಕಾರ್ ನಂ. ಕೆ.ಸಿ.ಇ. 4624

ಉಲ್ಲೇಖದಲ್ಲಿ ಹೇಳಲಾದ ವಾಹನಗಳು ಕೊಡಗು ಜಿಲ್ಲೆಯಲ್ಲಿ ಸರ್ಕಾರದ ಪರವಾನಿಗೆ ಇಲ್ಲದೆ ಹಾಗೂ ಕಾನೂನಿಗೆ ವಿರೋಧವಾಗಿ ಅಕ್ರಮ ಸಾರಾಯಿ, ಮದ್ಯಸಾರ, ಸ್ವದೇಶಿ ಮದ್ಯಗಳನ್ನು ಸಾಗಾಣಿಕೆ ಮಾಡುತ್ತಿರುವಾಗ ಈ ಕೆಳಕಂಡ ಎಂಟು ವಾಹನಗಳ ಮೇಲೆ ಮೊಕದ್ದಮೆಯನ್ನು ದಾಖಲು ಮಾಡಿರುತ್ತಾರೆ.

1. ಪೊನ್ನಂಪೇಟೆ ಪೊಲೀಸ್ ಉಪ ನಿರೀಕ್ಷಕರ ಮೊಕದ್ದಮೆ ಸಂಖ್ಯೆ: 103/2003, ದಿನಾಂಕ:17.01.2003ರಲ್ಲಿ ವಶಪಡಿಸಿಕೊಂಡ ಅಂಬಾಸಿಡರ್ ಕಾರ್ ನಂ.ಸಿ.ಆರ್.ಯು. 9378.
2. ವಿರಾಜಪೇಟೆ ನಗರ ಠಾಣೆ ಆರಕ್ಷಕ ಉಪ ನಿರೀಕ್ಷಕರ ಮೊ.ಸಂ.28/2003, ದಿನಾಂಕ:09.03.2003ರಲ್ಲಿ ವಶಪಡಿಸಿಕೊಂಡ ಅಂಬಾಸಿಡರ್ ಕಾರ್ ನಂ. ಕೆ.ಆರ್.ಕೆ. 7701.
3. ಪೆರಂಬಾಡಿ ತನಿಖಾ ಠಾಣೆ ಅಬಕಾರಿ ನಿರೀಕ್ಷಕರ ಮೊ.ಸಂ. 3/2003-04, ದಿನಾಂಕ:12.06.2004ರಲ್ಲಿ ವಶಪಡಿಸಿಕೊಂಡ ಮಿನಿ ಲಾರಿ ನಂ.ಕೆ.ಎಲ್. 7-ಕೆ.36.
4. ಅಬಕಾರಿ ಉಪ ನಿರೀಕ್ಷಕರು ವಿರಾಜಪೇಟೆ ಸಂಚಾರಿದಳ ರವರ ಪ್ರ.ವ.ನಂ. 35/2003-04, ದಿನಾಂಕ:29.10.2002ರಲ್ಲಿ ವಶಪಡಿಸಿಕೊಂಡ ಅಂಬಾಸಿಡರ್ ಕಾರ್ ಎಂ.ಇ.ಜಿ.1854.
5. ವಿರಾಜಪೇಟೆ ಸಂಚಾರಿದಳದ ಅಬಕಾರಿ ಉಪ ನಿರೀಕ್ಷಕರ ಪ್ರ.ವ.ನಂ. 16/2002-03, ವಶಪಡಿಸಿಕೊಂಡ ಆಟೋ ರಿಕ್ಷಾ ನಂ. ಎಂ.ವೈ.ಝಡ್. 6800
6. ಅಬಕಾರಿ ಉಪ ನಿರೀಕ್ಷಕರು, ಸಂಚಾರಿದಳ, ವಿರಾಜಪೇಟೆ ಇವರ ಪ್ರ.ವ. 61/98-99, ದಿನಾಂಕ: 02.04.99ರಲ್ಲಿ ವಶಪಡಿಸಿಕೊಂಡ ಆಟೋ ರಿಕ್ಷಾ ಸ.ಕೆ.ಎ. 12-2680
7. ಅಬಕಾರಿ ಉಪ ನಿರೀಕ್ಷಕರು, ಸಂಚಾರಿದಳ, ವಿರಾಜಪೇಟೆ ರವರ ಪ್ರ.ವ.ನಂ. 14/2002-03, ದಿನಾಂಕ:29.10.2002ರಲ್ಲಿ ವಶಪಡಿಸಿಕೊಂಡ ಮಾರುತಿ 800 ನಂ. ಕೆಎ.03-ಎಂ.7042.
8. ಪೆರಂಬಾಡಿ ತನಿಖಾ ಠಾಣೆ ಅಬಕಾರಿ ನಿರೀಕ್ಷಕರ ಪ್ರ.ವ.ನಂ. 1/2002-03, ದಿನಾಂಕ:15.01.2003ರಲ್ಲಿ ವಶಪಡಿಸಿಕೊಂಡ ಅಂಬಾಸಿಡರ್ ಕಾರ್ ನಂ. ಕೆ.ಸಿ.ಇ. 4674.

ಸದರಿ ವಾಹನಗಳ ಬಗ್ಗೆ ಮುಂದಿನ ಕ್ರಮ ಕೈಗೊಳ್ಳಲು ಈ ಪ್ರಾಧಿಕಾರದಲ್ಲಿ ಅಬಕಾರಿ ಕಾಯಿದೆ 1965ರ ಕಲಂ 43(ಎ) ಅಡಿಯಲ್ಲಿ ವಿಚಾರಣೆ ನಡೆಸಲು ಸಂಬಂಧಪಟ್ಟ ವಾಹನದ ಮಾಲಿಕರುಗಳಿಗೆ ಅವಕಾಶ ನೀಡಲು ಹಲವಾರು ಬಾರಿ ಸಮನ್ಸ್ ನೀಡಲಾಯಿತು. ಹಾಗೂ ಇನ್ನು ಕೆಲವು ವಾಹನದ ಮಾಲಿಕರಿಗೆ ಷೋಕಾಸ್ ನೋಟಿಸ್ ನೀಡಿದರೂ ಸಹ ಯಾವುದೇ ಉತ್ತರ ಬಂದಿರುವುದಿಲ್ಲ. ಹಾಗೂ ಇನ್ನು ಕೆಲವು ವಾಹನಗಳ ಮಾಲಿಕತ್ವದ ಬಗ್ಗೆ ಯಾವುದೇ ಮಾಹಿತಿ ದೊರೆಯುತ್ತಿಲ್ಲ.

ಆದುದರಿಂದ ಸದರಿ ವಾಹನದ ಮಾಲಿಕರು ಈ ಪ್ರಕಟಣೆ ಹೊರಡಿಸಿದ 15 ದಿವಸಗಳೊಳಗೆ ಈ ಪ್ರಾಧಿಕಾರದ ಮುಂದೆ ಹಾಜರಾಗಿ ಮೊಕದ್ದಮೆಯನ್ನು ನಡೆಸಲು ಸೂಚಿಸಿದೆ ಇಲ್ಲದ ಪಕ್ಷದಲ್ಲಿ ಯಾವುದೇ ಸೂಚನೆ ನೀಡದೆ ಅಬಕಾರಿ ಕಾಯಿದೆ 1965ರ ಕಲಂ 43(ಎ) ಪ್ರಕಾರ ನೇರವಾಗಿ ಸದರಿ ವಾಹನಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

ಅಧಿಕೃತ ಅಧಿಕಾರಿ ಹಾಗೂ
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್,
ಕೊಡಗು ಜಿಲ್ಲೆ, ಮಡಿಕೇರಿ.

ಪಿ.ಆರ್. 1099

**ಪ್ರಧಾನ ದಿವಾಣಿ ನ್ಯಾಯಾಧೀಶರು (ಕಿ ವಿ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಚಿಕ್ಕಬಳ್ಳಾಪುರ, ಕೋಲಾರ ಜಿಲ್ಲೆ**

**ಪ್ರಕಟಣೆ**

**ಸಿ.ಮಿಸ್. 57/1997**

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, ಈ ಕೆಳಕಂಡ ವಾರಸುದಾರರಿಲ್ಲದ ವಾಹನವನ್ನು ಚಿಕ್ಕಬಳ್ಳಾಪುರ ನಗರ ಆರಕ್ಷಕರು ವಶಪಡಿಸಿಕೊಂಡು, ಈ ನ್ಯಾಯಾಲಯದ ಮುಂದೆ ಹಾಜರುಪಡಿಸಿರುತ್ತಾರೆ.

ಆದುದರಿಂದ ಸದರಿ ವಾಹನವನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬ ಬಗ್ಗೆ ಯಾವುದೇ ಹಕ್ಕು ಬಾಧ್ಯತೆಗಳನ್ನು ರುಜುವಾತುಪಡಿಸದಿದ್ದಲ್ಲಿ ಅಂತಹ ವ್ಯಕ್ತಿಗಳು ತಮ್ಮಲ್ಲಿರುವ ವಾಹನದ ಮಾಲೀಕತ್ವದ ಮೂಲ ದಾಖಲಾತಿಗಳೊಂದಿಗೆ ಈ ಪ್ರಕಟಣೆ ಪ್ರಕಟವಾದ 30 ದಿವಸಗಳೊಳಗಾಗಿ ಈ ನ್ಯಾಯಾಲಯದ ಮುಂದೆ ರುಜುವಾತುಪಡಿಸುವುದು. ನಿಗದಿತ ಅವಧಿಯ ನಂತರ ಬಂದ ಯಾವುದೇ ಅಹವಾಲನ್ನು ಪರಿಗಣಿಸಲಾಗುವುದಿಲ್ಲ.

| ಕ್ರಮ ಸಂಖ್ಯೆ | ಮು.ಮಾ.ಸಂ. | ನೋಂದಣಿ ಸಂಖ್ಯೆ | ಇಂಜಿನ್ ನಂ. |
|---|---|---|---|
| 1. | ಪಿ.ಆರ್.ನಂ. 12/2000 | ಯಮಹಾ ಆರ್‌ಎಕ್ಸ್ ಮೋಟಾರ್ ಸೈಕಲ್ ನಂ. ಕೆ.ಎ-22-ಇ-2802 ಕಪ್ಪು ಬಣ್ಣ ಇರುತ್ತದೆ | ಐಎಲ್‌ಐ 201085 |

ಪಿ.ಆರ್. 1160

**ಎಸ್. ನಾಗಶ್ರೀ**
ಪ್ರಧಾನ ದಿವಾಣಿ ನ್ಯಾಯಾಧೀಶರು (ಕಿ ವಿ) ಮತ್ತು ಜೆ.ಎಂ.ಎಫ್.ಸಿ.
ಚಿಕ್ಕಬಳ್ಳಾಪುರ.

**IN THE COURT OF HON'BLE 1st ADDL. CHIEF METROPOLITON MAGISTRATE, BANGALORE CITY**

**NOTIFICATION**

It is hereby notified for the information of the public that the unclaimed properties mentioned under are in the custody of the Girinagar Police Station, Bangalore city, as unclaimed shall be confiscated to the Government and disposed off according to law if not calimed by the owner with proof of ownership, with in six months from the date of publication of Notification.

| Sl. No. | Police Station | N.C. No. | P.F.No. | Date | Detail of Materials |
|---|---|---|---|---|---|
| 1. | Girinagar | 184/02 | 36/02 | 11/04/2002 | One Bajaj K.B. 100 Motor Cycle No. KA-01-J-9848 Black Colour Engine No. E30CEO32062 Charsee No. C300EO32724 |
| 2. | Girinagar | 213/02 | 47/02 | 25/04/2002 | One TVS 50 XL No CAC-7359 Green Colour Charsee No. 81540581 Engine No. 80740581 |
| 3. | Girinagar | 78/03 | 023/03 | 22/02/2003 | One Bajaj Super Scooter No. MEJ-846 Ananda Colour. |

PR-1161

Addl. Chief Metropoliton Magistrate,
Bangalore City.

**NEW MANGALORE PORT TRUST**

**NOTIFICATION**

**No. 36/ 1/ 2004-TGA.6 (KIOCL), Dated: 27th July, 2004**

In exercise of the powers conferred by Section 48 of the Major Port Trusts Act, 1963 (38 of 1963), the Tariff Authority for Major Ports has fixed the wharfage charges on Iron ore / pellets exported by the Kudremukh Iron Ore Co. Ltd., (KIOCL) from New Mangalore Port Trust during 2002-03 @ **Rs.29.74 PMT.**

The notification in this regard was published in the Gazette of India, Extraordinary [Part III Section 4] vide Notification No. TAMP/ 17/ 2004-NMPT dated 19th May 2004 in Gazette No. 88 and communicated vide Letter No. TAMP / 17/ 2004-NMPT dated 19th May 2004.

PD-52

Traffic Manager.
New Mangalore Port Trust,
Panambur-575010

**ಕರ್ನಾಟಕ ನೀರಾವರಿ ನಿಗಮ ನಿಯಮಿತ**

**ಮುಖ್ಯ ಇಂಜಿನೀಯರ್‌ರ ಕಛೇರಿ, ಕನೀನಿನಿ, ನೀರಾವರಿ (ಉ) ವಲಯ, ಬೆಳಗಾವಿ**

**ಸಂ. ಸಿಇಎನ್:ಇತರೆ: ಇಎಸ್ಐ:03, ಬೆಳಗಾವಿ, ದಿನಾಂಕ: 8ನೇ ಡಿಸೆಂಬರ್, 2003**

ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2000ದ 3ನೇ ಪ್ರಕರಣದ (ಬಿ) ಖಂಡದಡಿಯಲ್ಲಿ ಮುಖ್ಯ ಇಂಜಿನೀಯರ್, ಕನೀನಿನಿ, ನೀರಾವರಿ (ಉ) ವಲಯ ಬೆಳಗಾವಿ ಕಛೇರಿಯ ವಿವರಗಳ ಪ್ರಕಟಣೆ.

**1. ರಚನೆ, ಪ್ರಕಾರ್ಯಗಳು ಮತ್ತು ಕರ್ತವ್ಯಗಳ ವಿವರ:**

ಮುಖ್ಯ ಇಂಜಿನೀಯರ್, ಕನೀನಿನಿ, ನೀರಾವರಿ (ಉ) ವಲಯ ಕಛೇರಿಯು ಬೆಳಗಾವಿಯಲ್ಲಿ ಕಾರ್ಯನಿರ್ವಹಿಸುತ್ತಿದೆ. ಶ್ರೀ ಜೆ.ಆರ್.ಕೆ. ಕರಡಿ, ಮುಖ್ಯ ಇಂಜಿನೀಯರ್‌ರವರು ಈ ಕಛೇರಿಯ ಪ್ರಭಾರವನ್ನು ಹೊಂದಿರುವರು. ಶ್ರೀ ಆರ್.ಎಲ್. ಕಲ್ಯಾಣಿ, ಉಪ ಮುಖ್ಯ ಇಂಜಿನೀಯರ್, ಶ್ರೀ ಎಂ.ಜಿ. ಹೆಗಡೆ, ಕಾರ್ಯನಿರ್ವಾಹಕ ಇಂಜಿನೀಯರ್, ಶ್ರೀ ಜಿ.ಎಂ. ಗುರವ, ಉಪ ನಿರ್ದೇಶಕರು, ಸಾಂಖ್ಯಿಕ ಹಾಗೂ ಏಳು ಜನ ತಾಂತ್ರಿಕ ಸಹಾಯಕರು, ಓರ್ವ ನಿಬಂಧಕರು, 14 ಸಹಾಯಕ ಇಂಜಿನೀಯರ್‌ರವರುಗಳು ಮತ್ತು 'ಸಿ' ಮತ್ತು 'ಡಿ' ವರ್ಗದ ನೌಕರರು ಮುಖ್ಯ ಇಂಜಿನೀಯರ್, ಕನೀನಿನಿ, ನೀ(ಉ) ವಲಯ ಕಛೇರಿಯಲ್ಲಿ ಕಾರ್ಯನಿರ್ವಹಿಸುತ್ತಿರುವರು.

**1) ಕಛೇರಿಯ ಪ್ರಕಾರ್ಯಗಳು ಈ ಕೆಳಗಿನಂತಿವೆ:**

ಮುಖ್ಯ ಇಂಜಿನೀಯರ್, ಕನೀನಿನಿ, ನೀರಾವರಿ (ಉ) ವಲಯ ಬೆಳಗಾವಿ ಕಛೇರಿಯ ಅಡಿಯಲ್ಲಿ ಈ ಕೆಳಕಂಡ ವೃತ್ತಗಳು ಕಾರ್ಯನಿರ್ವಹಿಸುತ್ತಿವೆ.

1. ಸೂಪರಿಂಟೆಂಡಿಂಗ್ ಇಂಜಿನೀಯರ್, ಮಎದಂಕಾನಿ ವೃತ್ತ, ನವಿಲುತೀರ್ಥ
2. ಸೂಪರಿಂಟೆಂಡಿಂಗ್ ಇಂಜಿನೀಯರ್, ಮಬದಂಕಾನಿ ವೃತ್ತ, ಧಾರವಾಡ
3. ಸೂಪರಿಂಟೆಂಡಿಂಗ್ ಇಂಜಿನೀಯರ್, ಘಎದಂಕಾ ವೃತ್ತ, ಜಮಖಂಡಿ
4. ಸೂಪರಿಂಟೆಂಡಿಂಗ್ ಇಂಜಿನೀಯರ್, ಘಬದಂಕಾನಿ ವೃತ್ತ, ಹಿಡಕಲ್ ಡ್ಯಾಂ
5. ಸೂಪರಿಂಟೆಂಡಿಂಗ್ ಇಂಜಿನೀಯರ್ (ವಿನ್ಯಾಸ) ವಲಯ ಕಛೇರಿ, ಬೆಳಗಾವಿ.
6. ಸೂಪರಿಂಟೆಂಡಿಂಗ್ ಇಂಜಿನೀಯರ್, ಭೂ.ಅ.ಅ. (ತಾಂತ್ರಿಕ) ಮಲಪ್ರಭಾ ಮತ್ತು ಘಟಪ್ರಭಾ ಯೋಜನೆಗಳು, ಬೆಳಗಾವಿ.

ಈ ಕೆಳಕಂಡ ವಿಷಯಗಳು ನೀರಾವರಿ (ಉತ್ತರ) ವಲಯ, ಬೆಳಗಾವಿಯ ಕಾರ್ಯವ್ಯಾಪ್ತಿಯಲ್ಲಿ ಬರುತ್ತವೆ.

ಅ) ಈ ವಲಯಕ್ಕೆ ವಹಿಸಲಾದ ಭಾರಿ ಮತ್ತು ಮಧ್ಯಮ ನೀರಾವರಿ ಯೋಜನೆಗಳಾದ ಘಟಪ್ರಭಾ, ಮಲಪ್ರಭಾ ಹಿಪ್ಪರಗಿ, ಮಾರ್ಕಂಡೇಯ, ಹರಿನಾಲಾ, ದೂಧಗಂಗಾ, ಕಳಸಾ ನಾಲಾ ಹಾಗೂ ಬಂಧೂರ ನಾಲಾ ತಿರುವು ಯೋಜನೆ ಮತ್ತು ಮಹಾದಾಯಿ ತಿರುವು ಯೋಜನೆಗಳ ತನಿಖೆ, ಸರ್ವೇಕ್ಷಣಾ ನಿರ್ಮಾಣ ಹಾಗೂ ನೀರಾವರಿ ನಿರ್ವಹಣೆ ಇತ್ಯಾದಿ ಹಾಗೂ ಸರ್ಕಾರದಿಂದ ಇತ್ತೀಚೆಗೆ ಆಡಳಿತಾತ್ಮಕ ಅನುಮೋದನೆಗೊಂಡ "ಹಿರಣ್ಯಕೇಶಿ ನದಿಯಿಂದ 8.00 ಟಿಎಂಸಿ ನೀರೆತ್ತಿ ಘಟಪ್ರಭಾ ಬಲದಂಡೆ ಕಾಲುವೆಗೆ ಹರಿಸುವ ಯೋಜನೆ"ಯ ನಿರ್ಮಾಣ.

ಆ) ಈ ವಲಯಕ್ಕೆ ಇತ್ತೀಚೆಗೆ ಹಸ್ತಾಂತರಿಸಿದ ಈ ಕೆಳಗಿನ ಏತ ನೀರಾವರಿ ಯೋಜನೆಗಳ ನಿರ್ಮಾಣ ಕೆಲಸಗಳು:

1. ಶ್ರೀ ರಾಮೇಶ್ವರ ಏತ ನೀರಾವರಿ ಯೋಜನೆ
2. ಬಳ್ಳಾರಿ ನಾಲಾ ಏತ ನೀರಾವರಿ ಯೋಜನೆ
3. ಕೊಳಚಿ ಏತ ನೀರಾವರಿ ಯೋಜನೆ
4. ಕೊಣ್ಣೂರ ಏತ ನೀರಾವರಿ ಯೋಜನೆ
5. ಬೆಣ್ಣೆಹಳ್ಳ ಏತ ನೀರಾವರಿ ಯೋಜನೆ

ಇ) ಕೇಂದ್ರದ ನೆರವು ಪಡೆದು ಎ.ಐ.ಬಿ.ಪಿ. ಯೋಜನೆ ಅಡಿ ನೀರಾವರಿ ಯೋಜನೆಗಳನ್ನು ಶೀಘ್ರವಾಗಿ ಕಾರ್ಯಗತಗೊಳಿಸುವುದು.

ಈ) ವಲಯದ ಯೋಜನೆಗಳ ಕಾಮಗಾರಿಗಳಿಗೆ ಸಂಬಂಧಿಸಿದಂತೆ ಅನುದಾನ ವೆಚ್ಚದ ಪತ್ರ ವ್ಯವಹಾರ, ಆಯವ್ಯಯ, ಸಾರ್ವಜನಿಕ ಲೆಕ್ಕಪತ್ರ ಸಮಿತಿ, ವಿಷಯ ಸಮಿತಿ, ಅಂದಾಜು ಸಮಿತಿಗಳಿಗೆ ಸಂಬಂಧಿಸಿದ ಮಾಹಿತಿಗಳನ್ನು ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನೀರಾವರಿ ನಿಗಮ ನಿಯಮಿತ ಹಾಗೂ ಸರ್ಕಾರಕ್ಕೆ ಒದಗಿಸುವುದು.

ಉ) ಈ ವಲಯದ ವ್ಯಾಪ್ತಿಯಲ್ಲಿ ಬರುವ ಅಧೀಕ್ಷಕ ಇಂಜಿನೀಯರ್, ಕಾರ್ಯಪಾಲಕ ಇಂಜಿನೀಯರ್, ಸಹಾಯಕ ಕಾರ್ಯಪಾಲಕ ಇಂಜಿನೀಯರ್, ಸಹಾಯಕ ಇಂಜಿನೀಯರ್, ಕಿರಿಯ ಇಂಜಿನೀಯರ್, ಲಿಪಿಕ ನೌಕರರು ಹಾಗೂ ಇತರ ಎಲ್ಲಾ ಸಿಬ್ಬಂದಿವರ್ಗಕ್ಕೆ ಸೇರಿದ ಅಧಿಕಾರಿ: ನೌಕರರ ಸೇವಾ ವಿಷಯಗಳು.

**2) ಅಧಿಕಾರಿಗಳ ಕರ್ತವ್ಯಗಳು ಮತ್ತು ನಿರ್ವಹಿಸುತ್ತಿರುವ ವಿಷಯಗಳ ವಿವರಗಳು**

| ಕ್ರಮ ಸಂಖ್ಯೆ | ಅಧಿಕಾರಿಯ ಹೆಸರು ಮತ್ತು ಪದನಾಮ | ನಿರ್ವಹಿಸುತ್ತಿರುವ ಕರ್ತವ್ಯ ವಿಷಯಗಳು | ದೂರವಾಣಿ ಸಂಖ್ಯೆ |
|---|---|---|---|
| 1. | **ಶ್ರೀಯುತ:** ಜೆ.ಆರ್.ಕೆ. ಕರಡಿ ಮುಖ್ಯ ಇಂಜಿನೀಯರ್ | ವಲಯದ ಎಲ್ಲಾ ವಿಷಯಗಳ ಪ್ರಭಾರ | 2422639 |
| 2. | ಆರ್.ಎಲ್. ಕಲ್ಯಾಣ ಉಪ ಮುಖ್ಯ ಇಂಜಿನೀಯರ್ | ವಲಯದ ಎಲ್ಲಾ ಕಾಮಗಾರಿ ಹಾಗೂ ಆಯವ್ಯಯ ವಿಷಯಗಳ ಪ್ರಭಾರ | 2420108 226 (ವಿಸ್ತರಣೆ) |

| ಕ್ರಮ ಸಂಖ್ಯೆ | ಅಧಿಕಾರಿಯ ಹೆಸರು ಮತ್ತು ಪದನಾಮ | ನಿರ್ವಹಿಸುತ್ತಿರುವ ಕರ್ತವ್ಯ ವಿಷಯಗಳು | ದೂರವಾಣಿ ಸಂಖ್ಯೆ |
|---|---|---|---|
| 3. | ಎಂ.ಜಿ. ಹೆಗಡೆ<br>ಕಾರ್ಯನಿರ್ವಾಹಕ ಇಂಜನೀಯರ್ | ವಲಯದ ಎಲ್ಲ ಯೋಜನಾ ವಿನ್ಯಾಸ ಮತ್ತು ಹಣಕಾಸು ವಿಷಯಗಳ ಪ್ರಭಾರ | 2420108<br>228 (ವಿಸ್ತರಣೆ) |
| 4. | ಜೆ.ಎ. ಲಿಂಗಣ್ಣವರ,<br>ತಾಂತ್ರಿಕ ಸಹಾಯಕರು | ಕಾಮಗಾರಿ ಶಾಖೆಯಲ್ಲಿ ಬರುವ ಘಟಪ್ರಭಾ ಮತ್ತು ಮಲಪ್ರಭಾ ಎಡದಂಡೆ ಕಾಲುವೆ ಯೋಜನೆಗಳಿಗೆ ಸಂಬಂಧಿಸಿದ ಅಂದಾಜು ಪತ್ರಿಕೆ, ಗು.ಪತ್ರ, ಟೆಂಡರ್‌ಗಳು, ಕೋರ್ಟ್ ಕೇಸ್‌ಗಳು, ಭೂಸ್ವಾಧೀನ ಬಗ್ಗೆ ಪತ್ರ ವ್ಯವಹಾರ, ಯಾಂತ್ರಿಕ ಶಾಖೆಯ ಪತ್ರ ವ್ಯವಹಾರ, ಆಯವ್ಯಯ ಶಾಖೆಯಲ್ಲಿಯ ಎಲ್ಲಾ ಪತ್ರ ವ್ಯವಹಾರಗಳು ನೋಡಿಕೊಂಡು ಅವುಗಳ ವಿಲೇವಾರಿ ಮಾಡಲು ಮುಖ್ಯ ಇಂಜಿನೀಯರ್‌ರವರಿಗೆ ಸಹಾಯ ಮಾಡುವುದು ಹಾಗೂ ಇನ್ನಿತರ ವಹಿಸಿದ ಕೆಲಸ ಮಾಡುವುದು. | 2420108<br>227 (ವಿಸ್ತರಣೆ) |
| 5. | ಟಿ.ಜಿ. ಬುಳ್ಳಾ<br>ತಾಂತ್ರಿಕ ಸಹಾಯಕರು | ಕಾಮಗಾರಿ ಶಾಖೆಯ ನರಗುಂದ ಶಾಖಾ ಕಾಲುವೆಗೆ ಮಲಪ್ರಭಾ ಕಾಲುವೆಗೆ ಸಂಬಂಧಿಸಿದ ಅಂದಾಜು ಪತ್ರಿಕೆಗಳನ್ನು ದರಖಾಸ್ತು ಪುಸ್ತಕಗಳನ್ನು ಟೆಂಡರ್‌ಗಳನ್ನು ಕೋರ್ಟ್ ಪ್ರಕರಣಗಳನ್ನು ಪತ್ರ ವ್ಯವಹಾರಗಳನ್ನು ಪರಿಶೀಲಿಸುವುದು ಮತ್ತು ವಿಲೇವಾರಿ ಮಾಡುವುದು ಇತ್ಯಾದಿ ಕೆಲಸಗಳು. | 2420108<br>234 (ವಿಸ್ತರಣೆ) |
| 6. | ಎಂ.ವಿ. ಶ್ರೀನಿವಾಸ<br>ತಾಂತ್ರಿಕ ಸಹಾಯಕರು | ಯೋಜನಾ ಶಾಖೆಯ ಎಂ.ಎಂ.ಆರ್. ಸಭೆಗೆ ಸಂಬಂಧಿಸಿದ ವಿಷಯಗಳು, ಡ್ಯಾಮ್ ಸೇಫ್ಟಿ, ಎ.ಐ.ಬಿ.ಪಿ. ಮಾನಿಟರಿಂಗ್ ಮತ್ತು ಇತರೆ ವಿಷಯಗಳು ಟಿ.ಎಸ್.ಸಿ.ಯ ಕಡತಗಳು ಎಡಬ್ಲ್ಯೂಪಿ ಮತ್ತು ನೀರು ಬಿಡುವ ಸಂಬಂಧದ ವಿಷಯಗಳು. | 2420108<br>238 (ವಿಸ್ತರಣೆ) |
| 7. | ಎಸ್.ಎಲ್. ಹೊನ್ನತ್ತಿ<br>ತಾಂತ್ರಿಕ ಸಹಾಯಕರು | ಮಲಪ್ರಭಾ ಯೋಜನೆ, ಮಾರ್ಕಂಡೇಯ ಯೋಜನೆ, ಕಳಸಾ ತಿರುವು ಯೋಜನೆ, ಬಂದೂರ ತಿರುವು ಯೋಜನೆ ಇವುಗಳಡಿ ಇರುವ ಅಣೆಕಟ್ಟು ಕಾಲುವೆಗಳು, ಸಿ.ಡಿ.ಗಳು ರಸ್ತೆಗಳು ಮತ್ತು ರಸ್ತೆ ಸೇತುವೆಗಳ ವಿನ್ಯಾಸ ಮತ್ತು ನಕ್ಷೆ ತಯಾರಿಸಲು ತಾಂತ್ರಿಕ ಸಹಾಯ ನೀಡುವುದು, ಘಟಪ್ರಭಾ ಯೋಜನೆ ಅಡಿ ಇರುವ ಹಂಚಿಕೆ ಮತ್ತು ಉಪಹಂಚಿಕೆಗಳ ಸಿ.ಡಿ. ಸಹಿತ ವಿನ್ಯಾಸ ಮತ್ತು ನಕ್ಷೆ ತಯಾರಿಸಲು ತಾಂತ್ರಿಕ ಸಹಾಯ ನೀಡುವುದು ಹಾಗೂ ವಿನ್ಯಾಸಗಳಿಗೆ ಸಂಬಂಧಿಸಿದ ಪತ್ರ ವ್ಯವಹಾರ. | 2420108<br>235 (ವಿಸ್ತರಣೆ) |
| 8. | ಆರ್.ಎಂ. ಪಿಸ್ಸೆ<br>ತಾಂತ್ರಿಕ ಸಹಾಯಕರು | ಯೋಜನಾ ಶಾಖೆಯ ಮನವಿ ವಿಭಾಗ ದೈನಂದಿನ ನೀರಿನ ಮಟ್ಟದ ವಿವರ ಲೈಬ್ರರಿ ಮತ್ತು ಛಾಯಾಚಿತ್ರ ಹಾಗೂ ಗಣಕಯಂತ್ರ ವಿಭಾಗ, ಝರಾಕ್ಸ್ ವಿಭಾಗ ಇತ್ಯಾದಿ ಕೆಲಸಗಳ ಪತ್ರ ವ್ಯವಹಾರ. | 2420108<br>239 (ವಿಸ್ತರಣೆ) |
| 9. | ಎಂ. ಸತೀಶಕುಮಾರ<br>ತಾಂತ್ರಿಕ ಸಹಾಯಕರು | 1. ನೀರಾವರಿ (ಉತ್ತರ) ವಲಯದ ನೀರಾವರಿ ಯೋಜನೆಗಳಿಗೆ ಕೇಂದ್ರ ಜಲ ಆಯೋಗದ ರಾಜ್ಯದ ಒಪ್ಪಿಗೆ ಪಡೆಯುವುದು.<br>2. ಮಲಪ್ರಭಾ, ಘಟಪ್ರಭಾ, ಹಿಪ್ಪರಗಿ ನೀರಾವರಿ ಯೋಜನೆಗಳ ಪರಿಷ್ಕೃತ ಅಂದಾಜು ಪತ್ರಿಕೆ ತಯಾರಿಸುವುದು. | 2420108<br>236 (ವಿಸ್ತರಣೆ) |

| ಕ್ರಮ ಸಂಖ್ಯೆ | ಅಧಿಕಾರಿಯ ಹೆಸರು ಮತ್ತು ಪದನಾಮ | ನಿರ್ವಹಿಸುತ್ತಿರುವ ಕರ್ತವ್ಯ ವಿಷಯಗಳು | ದೂರವಾಣಿ ಸಂಖ್ಯೆ |
|---|---|---|---|
| | ಎಂ. ಸತೀಶಕುಮಾರ<br>ತಾಂತ್ರಿಕ ಸಹಾಯಕರು | 3. ಕೆ.ಡಬ್ಲ್ಯೂ.ಡಿ.ಪಿ.ಯ ಬಗ್ಗೆ ಪತ್ರ ವ್ಯವಹಾರ.<br>4. ನೀರಾವರಿಗೆ: ಕೈಗಾರಿಕೆಗಳಿಗೆ ನೀರೆತ್ತುವ ಪರವಾನಿಗೆ ಇತ್ಯಾದಿ ಕೆಲಸಗಳು. | 2420108<br>236 (ವಿಸ್ತರಣೆ) |
| 10. | ಎಂ.ಕೆ. ಸಜ್ಜನ<br>ತಾಂತ್ರಿಕ ಸಹಾಯಕರು | ಘಟಪ್ರಭಾ ಯೋಜನೆ, ಹಿಪ್ಪರಗಿ ಯೋಜನೆ ಹರಿನಾಲಾ, ದೂಧಗಂಗಾ ಯೋಜನೆ ಈ ಜಲಾಶಯದ ಪ್ರದೇಶಗಳಲ್ಲಿ ಬರುವ ಏತ ನೀರಾವರಿ ಯೋಜನೆಗಳ ಕಾಲುವೆ ಸಿ.ಡಿ. ಇತ್ಯಾದಿಗಳ ವಿನ್ಯಾಸ ರಚನೆ: ತೀರುವಳಿ ವಿನ್ಯಾಸಕ್ಕೆ ಸಂಬಂಧಿಸಿದ ಪತ್ರ ವ್ಯವಹಾರ ಇತ್ಯಾದಿ. | 2420108<br>240 (ವಿಸ್ತರಣೆ) |
| 11. | ಜಿ.ಎಂ. ಗುರವ,<br>ಉಪನಿರ್ದೇಶಕರು (ಸಾಂಖ್ಯಿಕ) | ಯೋಜನೆಗೆ ಸಂಬಂಧಿಸಿದ ಅಂಕಿ ಅಂಶಗಳನ್ನು ಒದಗಿಸುವುದು. ನೀರಾವರಿಯಾದ ಕ್ಷೇತ್ರ, ನೀರಾವರಿಗೆ ಅಧಿಸೂಚಿಸಿದ ಕ್ಷೇತ್ರ ಹಾಗೂ ಕರಾಕರಣೆ ಕುರಿತು ಮಾಹಿತಿ ಒದಗಿಸುವುದು, ಮಳೆ ಮತ್ತು ರಸ್ತೆಗಳ ಮಾಹಿತಿ ಸಂಗ್ರಹಿಸುವುದು. | 2420108<br>223 (ವಿಸ್ತರಣೆ) |
| 12. | ಆರ್.ಎಸ್. ಬಜಂತ್ರಿ,<br>ನಿಬಂಧಕರು. | ಈ ವಲಯದ ಎ, ಬಿ ವೃಂದದ ಅಧಿಕಾರಿಗಳ ಮತ್ತು ಸಿ ಮತ್ತು ಡಿ ವೃಂದದ ಸಿಬ್ಬಂದಿಗಳ ಸೇವಾ ವಿಷಯಗಳ ನಿರ್ವಹಣೆ. | 2420108<br>230 (ವಿಸ್ತರಣೆ) |

ವಲಯ ಕಛೇರಿಯ ಅಧಿಕಾರಿಗಳು ಹಾಗೂ ನೌಕರರು ಕಛೇರಿ ಕೈಪಿಡಿ ಮತ್ತು ಕಛೇರಿ ಕಾರ್ಯವಿಧಾನದಲ್ಲಿ ಹಾಗೂ ಸಂಬಂಧಿಸಿದ ನಿಯಮಗಳಲ್ಲಿ ವಿಧಿಸಲಾದ ಕಾರ್ಯವಿಧಾನಕ್ಕೆ ಅನುಸಾರವಾಗಿ ಕರ್ತವ್ಯಗಳನ್ನು ನಿರ್ವಹಿಸುತ್ತಿರುತ್ತಾರೆ.

3) ಕರ್ನಾಟಕ ಮಾಹಿತಿ ಹಕ್ಕು ಅಧಿನಿಯಮ 2000ದ ಪ್ರಕರಣ (2) ಖಂಡ (ಎ), (ಸಿ) ಹಾಗೂ ಪ್ರಕರಣ 7ರ ಪ್ರಕಾರ ಈ ವಲಯ ಕಛೇರಿಗೆ ಸಂಬಂಧಿಸಿ ಈ ಕೆಳಕಂಡ ಪ್ರಾಧಿಕಾರಿಗಳನ್ನು ನಿಗದಿಗೊಳಿಸಲಾಗಿದೆ.

| | | |
|---|---|---|
| ಪ್ರಕರಣ 2 ಖಂಡ (ಸಿ) | ಮುಖ್ಯ ಇಂಜಿನೀಯರ್‌ರವರ ಕಛೇರಿ,<br>ಕನೀನಿನಿ, ನೀರಾವರಿ (ಉತ್ತರ) ವಲಯ, ಬೆಳಗಾವಿ. | ಸಾರ್ವಜನಿಕ ಪ್ರಾಧಿಕಾರ |
| ಪ್ರಕರಣ 2 ಖಂಡ (ಎ) | ಮುಖ್ಯ ಇಂಜಿನೀಯರ್,<br>ಕನೀನಿನಿ, ನೀರಾವರಿ (ಉತ್ತರ) ವಲಯ, ಬೆಳಗಾವಿ. | ಸಕ್ಷಮ ಪ್ರಾಧಿಕಾರ |
| ಪ್ರಕರಣ (7) | ಸರ್ಕಾರದ ಕಾರ್ಯದರ್ಶಿಗಳು, ಜಲ ಸಂಪನ್ಮೂಲ ಇಲಾಖೆ,<br>6ನೇ ಮಹಡಿ, ಬಹುಮಹಡಿ ಕಟ್ಟಡ, ಬೆಂಗಳೂರು. | ಅಪೀಲು ಪ್ರಾಧಿಕಾರ. |

ಈ ಅಧಿನಿಯಮದ ಪ್ರಕಾರ ಮಾಹಿತಿ ಪಡೆಯಲು ಇಚ್ಛಿಸುವವರು ಮೇಲ್ಕಂಡ ಪ್ರಾಧಿಕಾರಗಳಲ್ಲಿ ನಿಯಮಾನುಸಾರ ಮನವಿ ಸಲ್ಲಿಸಿ ಮಾಹಿತಿ ಪಡೆಯಬಹುದಾಗಿದೆ.

**ಜಿ.ಆರ್.ಕೆ. ಕರಡಿ**
ಮುಖ್ಯ ಇಂಜಿನೀಯರ್,
ಪಿ.ಡಿ. 51 ಕರ್ನಾಟಕ ನೀರಾವರಿ ನಿಗಮ ನಿಯಮಿತ, ನೀರಾವರಿ (ಉತ್ತರ) ಬೆಳಗಾವಿ.

## ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯ, ಸಾಗರ

## ಅಧಿಸೂಚನೆ

**ಸಂಖ್ಯೆ: ಅಮೊ.ವಾಹನ. 01/ 04-05, ದಿನಾಂಕ: 31ನೇ ಜುಲೈ, 2004**

ಸಾಗರ ವಿಭಾಗದ ವ್ಯಾಪ್ತಿಯಲ್ಲಿ ಶ್ರೀಗಂಧದ ಹಾಗೂ ಇತರೆ ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ್ದ ವಾಹನಗಳನ್ನು ಸಾಗರ ವಿಭಾಗದ ಇಲಾಖಾ ಸಿಬ್ಬಂದಿ ವರ್ಗದವರು ಸರ್ಕಾರದ ಪರ ಅಮಾನತ್ತುಪಡಿಸಿಕೊಂಡು ಸದರಿ ವಾಹನಗಳನ್ನು ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71(ಎ) ಪ್ರಕಾರ ಕ್ರಮ ಜರುಗಿಸುವಂತೆ ಈ ನ್ಯಾಯಾಲಯಕ್ಕೆ ಹಾಜರುಪಡಿಸಲಾದ ವಾಹನಗಳ ತಪಶೀಲು ಕೆಳಕಂಡಂತಿರುತ್ತದೆ.

| ಕ್ರ.ಸಂ. | ವಾಹನಗಳ ವಿವರ | ಅರಣ್ಯ ಮೊಕದ್ದಮೆ ಸಂಖ್ಯೆ | ಯಂತ್ರದ ಸಂಖ್ಯೆ | ಛಾಸೀಸ್ ಸಂಖ್ಯೆ |
|---|---|---|---|---|
| 1. | Hero Honda, CTD-957 | ಸಾಗರ ವಲಯದ ಅ.ಮೊ. ಸಂಖ್ಯೆ. 2/2004-05 | B-10E082471 | B-10F082311 |
| 2. | Jeep. MYC-2130 | ಶಿಕಾರಿಪುರ ವಲಯದ ಅ.ಮೊ. ಸಂಖ್ಯೆ 18/04-05 | 0910171 | CJ3B47209995 |

| ಕ್ರ.ಸಂ. | ವಾಹನಗಳ ವಿವರ | ಅರಣ್ಯ ಮೊಕದ್ದಮೆ ಸಂಖ್ಯೆ | ಯಂತ್ರದ ಸಂಖ್ಯೆ | ಚಾಸೀಸ್ ಸಂಖ್ಯೆ |
|---|---|---|---|---|
| 3. | Auto Reksha KA-15-2079 | ಸಾಗರ ವಲಯದ ಅ.ಮೊ. ಸಂಖ್ಯೆ. 27/04-05 | AEMBEH-69103 | 24FBFH-83254 |
| 4. | Auto Reksha KA-15-2327 | PSI ಸಾಗರ ಪೇಟೆ ಠಾಣೆ, ಗುನ್ನೆ ನಂ.132/2004 | ಕಾಣೆಸುತ್ತಿಲ್ಲ | ಕಾಣೆಸುತ್ತಿಲ್ಲ |

ಈ ಮೇಲ್ಕಂಡ ವಾಹನದ ಬಗ್ಗೆ ಯಾರು ವಾರಸುದಾರರು ಇಲ್ಲಿಯವರೆಗೆ ಹಾಜರಾಗದೇ ಇರುವುದರಿಂದ ಸದರಿ ವಾಹನಗಳ ನಿಜವಾದ ವಾರಸುದಾರರು ಯಾರಾದರೂ ಇದ್ದಲ್ಲಿ ಅವರು ವಾಹನಗಳ ಬಗ್ಗೆ ಅಧಿಕೃತ ಹಕ್ಕು ಬಾಧ್ಯತೆಗಳನ್ನು ಕೆಳ ಸಹಿ ಮಾಡಿರುವವರ ಸಮ್ಮುಖದಲ್ಲಿ ಅಧಿಸೂಚನೆಯು ಕರ್ನಾಟಕ ಸರ್ಕಾರದ ಗೆಜೆಟ್‌ನಲ್ಲಿ ಪ್ರಕಟವಾದ ದಿನಾಂಕದಿಂದ ಮೂವತ್ತು (30) ದಿನಗಳ ಒಳಗೆ ಹಾಜರುಪಡಿಸಬೇಕಾಗಿ ಮತ್ತು ವಾಹನಗಳನ್ನು ಶ್ರೀಗಂಧ ಮತ್ತು ಇತರೇ ಅರಣ್ಯ ಉತ್ಪನ್ನವನ್ನು ಕಳ್ಳಸಾಗಾಣೆ ಮಾಡಲು ಉಪಯೋಗಿಸಿದ್ದಕ್ಕಾಗಿ ವಾಹನಗಳನ್ನು ಏಕೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬುದರ ಬಗ್ಗೆ ಅವರುಗಳು ಅಧಿಕೃತ ಸಮಜಾಯಿಷಿಯನ್ನು ಬರಹದ ಮೂಲಕ ಇತರೆ ದಾಖಲಾತಿಗಳೊಂದಿಗೆ ಈ ಕೆಳಸಹಿ ಮಾಡಿದವರ ಸಮ್ಮುಖದಲ್ಲಿ ಹಾಜರುಪಡಿಸಲು ಈ ಮೂಲಕ ಪ್ರಕಟಿಸಲಾಗಿದೆ. ಈ ಮೇಲ್ಕಂಡ ವಾಹನಗಳ ಬಗ್ಗೆ ಯಾವ ವಾರಸುದಾರರು ಮೇಲ್ಕಾಣಿಸಿದ ಅವಧಿಯೊಳಗೆ ಲಿಖಿತ ಮೂಲಕ ಯಾವುದೇ ಅರ್ಜಿಯನ್ನು ಈ ಕೆಳಸಹಿದಾರರಿಗೆ ಸಲ್ಲಿಸದೇ ಇದ್ದಲ್ಲಿ ವಾಹನಗಳನ್ನು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ಎರಡನೇ ತಿದ್ದುಪಡಿ ಪ್ರಕಾರ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

ಅಧಿಕೃತ ಅಧಿಕಾರಿ ಹಾಗೂ

ಪಿ.ಆರ್. 1151 ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ.

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

## ಪ್ರಾರಂಭಿಕ ಅಧಿಸೂಚನೆ

**ನಂ.ಕೆ.ಎಸ್.ಎ. ಸಿಆರ್ 04/2004-05, ದಿನಾಂಕ: 2ನೇ ಆಗಸ್ಟ್, 2004**

ಬೆಂಗಳೂರು ನಗರ ಕಾರ್ಪೋರೇಷನ್ ವ್ಯಾಪ್ತಿಯ ಈ ಕೆಳ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರದೇಶದಲ್ಲಿನ ವಾಸದ ಮನೆಗಳು ಒತ್ತೋತ್ತಾಗಿದ್ದು ಜನರು ಸಾಮಾನ್ಯ ಸ್ಥಿತಿಯಲ್ಲಿ ವಾಸಿಸಲು ಅನಾನುಕೂಲ ಉಂಟಾಗಿದ್ದು ಹಾಲಿ ಇರುವ ಗುಡಿಸಲು/ ಮನೆಗಳು ದುರಸ್ಥಿ ಇಲ್ಲದೆ, ಕುಡಿಯುವ ನೀರು, ದೀಪ, ರಸ್ತೆ ಚರಂಡಿ ಇತ್ಯಾದಿ ಮೂಲಭೂತ ಸೌಕರ್ಯಗಳಿಲ್ಲದೆ ಅನಾರೋಗ್ಯಕರ ವಾತಾವರಣ ಉಂಟಾಗಿರುವುದನ್ನು ಕೊಳಚೆ ನಿರ್ಮೂಲನಾ ಮಂಡಳಿಯು ವರದಿ ಮಾಡಿದ್ದು, ಸದರಿ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನೆ) ಕಾಯ್ದೆ 1973ರ ಸೆಕ್ಷನ್ 3ರ ಪ್ರಕಾರ ಕೊಳಚೆ ಪ್ರದೇಶವೆಂದು ಘೋಷಿಸುವುದು ಅವಶ್ಯವೆಂದು ಕಂಡುಬಂದಿರುತ್ತದೆ.

ಆದ್ದರಿಂದ, ಈ ಕೆಳ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನೆ) ಕಾಯ್ದೆ 1973ರ ಸೆಕ್ಷನ್ 3ರ ಪ್ರಕಾರ ದತ್ತವಾಗಿರುವ ಅಧಿಕಾರದಂತೆ, ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ, ಬೆಂಗಳೂರು ರವರು ಕೊಳಚೆ ಪ್ರದೇಶವೆಂದು ಘೋಷಿಸಲು ಉದ್ದೇಶಿಸಿರುತ್ತಾರೆ.

ಈ ಮೇಲ್ಕಂಡ ಕ್ರಮದ ಬಗ್ಗೆ ಆಕ್ಷೇಪಣೆಗಳೇನಾದರೂ ಇದ್ದಲ್ಲಿ, ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಅಥವಾ ಆಯುಕ್ತರು, ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿ, ಶೇಷಾದ್ರಿಪುರಂ, ಬೆಂಗಳೂರು-560 020. ರವರಿಗೆ ಲಿಖಿತ ಮೂಲಕ ಅಂತಹ ಆಕ್ಷೇಪಣೆಗಳನ್ನು ಸಲ್ಲಿಸಲು ಈ ಅಧಿಸೂಚನೆಯು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ, ಹದಿನೈದು (15) ದಿನಗಳ ಕಾಲಾವಕಾಶವನ್ನು ನೀಡಲಾಗಿದೆ. ನಂತರ ಬಂದ ಆಕ್ಷೇಪಣೆಗಳನ್ನು ಪರಿಗಣಿಸಲಾಗುವುದಿಲ್ಲ.

### ಷೆಡ್ಯೂಲ್

ಬೆಂಗಳೂರು ನಗರ ಕಾರ್ಪೋರೇಷನ್ ವ್ಯಾಪ್ತಿಯ ಶಿವನಹಳ್ಳಿಯಲ್ಲಿನ ವೆಸ್ಟ್ ಆಫ್ ಕಾರ್ಡ್ ರಸ್ತೆ, ಬೆಂಗಳೂರು ಇಲ್ಲಿರುವ ಇಂದಿರಾನಗರ ಕೊಳಚೆ ಪ್ರದೇಶದ ಚೆಕ್ಕು ಬಂದಿ ಮತ್ತು ಹದ್ದು ಬಸ್ತು ತಃಖ್ತೆ.

| ಕ್ರಮ ಸಂಖ್ಯೆ | ಕೊಳಚೆ ಪ್ರದೇಶದ ಹೆಸರು ಮತ್ತು ಸ್ಥಳ | ಮಾಲೀಕರ ಹೆಸರು | ಸ.ನಂ. | ವಿಸ್ತೀರ್ಣ (ಎ. ಗುಂ.) | ಚೆಕ್ಕುಬಂದಿಗಳು | | | |
|---|---|---|---|---|---|---|---|---|
| | | | | | ಪೂರ್ವಕ್ಕೆ | ಪಶ್ಚಿಮಕ್ಕೆ | ಉತ್ತರಕ್ಕೆ | ದಕ್ಷಿಣಕ್ಕೆ |
| 1. | ಇಂದಿರಾನಗರ ಕೊಳಚೆ ಪ್ರದೇಶ. ಶಿವನಹಳ್ಳಿ, ವೆಸ್ಟ್ ಆಫ್ ಕಾರ್ಡ್ ರಸ್ತೆ, ಬೆಂಗಳೂರು. | ಟಿ.ಎಸ್. ಶೇಖರ್ ಬಿನ್ ಲೇಟ್ ಟಿ.ಪಿ. ಸದಾಶಿವಂ | 8/1, ಬಿ.ಡಿ.ಎ. ಸೈಟ್ ನಂ. 626 | 41x96.6+87/2 | ರಸ್ತೆ | ಮನೆ ಸಂಖ್ಯೆ. 625 | ರಸ್ತೆ | ಮನೆ ನಂ. 621 ಮತ್ತು 621-ಎ |

**ಜಿ.ಎಸ್. ನಾರಾಯಣಸ್ವಾಮಿ**

ಪಿ.ಆರ್. 1156 ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ, ಬೆಂಗಳೂರು.

## ನಗರಾಭಿವೃದ್ಧಿ ಇಲಾಖೆ

**ಅಧಿಸೂಚನೆ ನಂ.ನಅಇ 312 ಮೈಅಪ್ರಾ 2002, ಬೆಂಗಳೂರು, ದಿನಾಂಕ:16ನೇ ಡಿಸೆಂಬರ್, 2003**

ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರಗಳ ಕಾಯ್ದೆ 1987ರ ಕಲಂ 19(7) ಮತ್ತು ಕರ್ನಾಟಕ ಭೂ ಸ್ವಾಧೀನ ಕಾಯ್ದೆ 1894ರ ಕಲಂ 48(1) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರಗಳ ಕಾಯ್ದೆ 1987ರ ಅಧಿನಿಯಮ 19(1)ರನ್ವಯ ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರವು ಬೋಗಾದಿ 3ನೇ ಹಂತ ಬಡಾವಣೆಯನ್ನು ರಚಿಸುವ ಸಲುವಾಗಿ ಭೂ ಸ್ವಾಧೀನಪಡಿಸಿಕೊಳ್ಳಲು ಅಧಿಸೂಚನೆ ಸಂಖ್ಯೆ: ವನಇ 639 ಎಂಐಬಿ 93, ದಿನಾಂಕ: 19.03.1996ರಲ್ಲಿ ಹೊರಡಿಸಿದ್ದು ಇದು ದಿನಾಂಕ:25.07.1996ರ ರಾಜ್ಯಪತ್ರದಲ್ಲಿ ಭಾಗ-3ರಲ್ಲಿ ಪ್ರಕಟವಾಗಿರುತ್ತದೆ. ಈ ಜಮೀನುಗಳ ಪೈಕಿ ಈ ಕೆಳಗಿನ ಅನುಸೂಚಿಯಲ್ಲಿ ಸೂಚಿಸಿರುವ ಜಮೀನುಗಳನ್ನು ಈ ಕೆಳಕಂಡ ಷರತ್ತಿಗೆ ಒಳಪಟ್ಟು ಭೂ ಸ್ವಾಧೀನ ಪ್ರಕ್ರಿಯೆಯಿಂದ ಕೈ ಬಿಡಲಾಗಿದೆ.

**ಜಿಲ್ಲೆ: ಮೈಸೂರು** **ತಾಲ್ಲೂಕು: ಮೈಸೂರು** **ಗ್ರಾಮ: ಬೋಗಾದಿ**

| ಕ್ರ. ಸಂ. | ಸರ್ವೆ ನಂ. | ಖಾತೆದಾರರ: ಅನುಭವದಾರರ ಹೆಸರು | ಸ್ವತ್ತಿನ ವಿವರ | | | | | | | | ಭೂ ಸ್ವಾಧೀನದಿಂದ ಕೈಬಿಟ್ಟ ವಿಸ್ತೀರ್ಣ ಎಕರೆ ಗುಂಟೆ |
|---|---|---|---|---|---|---|---|---|---|---|---|
| | | | ಖುಷ್ಕಿ ಎ. ಗುಂ. | ಭಾಗಾಯ್ತು | ಖರಾಬು ಎ. ಗುಂ. | ಒಟ್ಟು ವಿಸ್ತೀರ್ಣ | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ | |
| 1. | 268 | ಎಂ.ಆರ್. ಕೃಷ್ಣದಾಸ್ | 15.10 | - | 0.03 | 15.13 | ದಟ್ಟಗಳ್ಳಿ ಗಡಿ | ಓಣಿ | 267<br>272 | 269<br>270<br>271 | 268:2 ರಲ್ಲಿ - 3.00<br>268:3 ರಲ್ಲಿ - 2.00<br>268:4 ರಲ್ಲಿ - 2.00<br>268:5 ರಲ್ಲಿ - 2.00 |
| | | | | | | | | | | ಒಟ್ಟು | **9.00** |
| 2. | 269:1 | ಎಂ.ಎಸ್. ಚಿನ್ನಸ್ವಾಮಿ,<br>ಎಸ್. ಸುಬ್ಬರಾವ್<br>ಎಸ್.ಎಸ್. ನಟರಾಜ್,<br>ಎಸ್. ಸುರೇಶ್. | 2.38 | - | 0.20 | 3.18 | ದಟ್ಟಗಳ್ಳಿ ಗಡಿ | 270<br>271 | 268 | ಕೂರಗಳ್ಳಿ ಗಡಿ | 2.38 |
| 3. | 269:2 | ದ್ಯಾವೇಗೌಡ ಬಿನ್ ಅಪ್ಪಯ್ಯಗೌಡ | 7.08 | - | 0.29 | 7.37 | ದಟ್ಟಗಳ್ಳಿ ಗಡಿ | 270<br>271 | 268 | ಕೂರಗಳ್ಳಿ ಗಡಿ | 7.08 |
| 4. | 270:2 | ದ್ಯಾವೇಗೌಡ ಬಿನ್ ಅಪ್ಪಯ್ಯಗೌಡ | 0.26 | - | - | 0.26 | 269 | 271 | 268 | 269 | 0.26 |
| | | | | | | | | | | ಒಟ್ಟು | **19.32** |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ವಿ. ಶ್ರೀಧರಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

ಪಿ.ಆರ್ 1138

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಉತ್ತರ ಕನ್ನಡ ಜಿಲ್ಲೆ, ಕಾರವಾರ ನ್ಯಾಯಾಲಯದಲ್ಲಿ**
**ನಂ. ಅಬಕಾರಿ:ಸಿಆರ್‌ಎಂ:ಡಿಟಿಸಿಆರ್:138:1992-93 ದಿನಾಂಕ: 28ನೇ ಜುಲೈ 2004**

**ಉಪಸ್ಥಿತರು :** ಶ್ರೀ ಕೆ. ಸಿ. ಹರಿದಾಸ್, ಕೆ.ಇ.ಎಸ್. ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಉತ್ತರ ಕನ್ನಡ ಜಿಲ್ಲೆ, ಕಾರವಾರ.

| **ಫಿರ್ಯಾದುದಾರರು** | **ವಿರುದ್ಧ** | **ಅರ್ಜಿದಾರರು:** |
|---|---|---|
| 1. ಎನ್. ಅಪ್ಪುಶೆಟ್ಟಿ, ಪೊಲೀಸ್ ಉಪ ನಿರೀಕ್ಷಕರು, ಕಡಲು ಪಡೆ, ಕಾರವಾರ. (ಮಾನ್ಯ ಅಭಿಯೋಗ ಸಹಾಯಕ ನಿರ್ದೇಶಕರು, ಕಾರವಾರ ರವರು ಪ್ರತಿನಿಧಿಸಿರುತ್ತಾರೆ) | | 1. ಶಂಕರ ನಾರಾಯಣ ಬೊಬ್ರುಕರ, ಸಾ: ಚಂಡಿಯಾ, ಕಾರವಾರ<br>2. ಕೃಷ್ಣ ಲಿಂಗಾ ಹರಿಕಂತ್ರ ಸಾ: ಕಿಲ್ಲೆಬಾಗ ಬಿಣಗಾ, ಕಾರವಾರ |

**(ಶ್ರೀ ಕೆ. ಆರ್. ನಾಯ್ಕ, ವಕೀಲರು ಕಾರವಾರ ಮತ್ತು ಶ್ರೀ ಎನ್. ಎಸ್. ಭಟ್, ವಕೀಲರು, ಕಾರವಾರ ಇವರುಗಳು ಪ್ರತಿನಿಧಿಸಿರುತ್ತಾರೆ).**

**ತೀರ್ಪು**

1. ಈ ಆರೋಪವನ್ನು ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 34 ರಂತೆ ಹೊರಿಸಿದ್ದು, ಜಪ್ತಿಯಾದಂತಹ ಸ್ವತ್ತುಗಳನ್ನು ಕಲಂ 43ಎ(2) ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಸಲ್ಲಿಸಿದ ಪ್ರಸ್ತಾವನೆಯಾಗಿರುತ್ತದೆ.

2. ಈ ಪ್ರಕರಣದ ಫಿರ್ಯಾದುದಾರರು ತನಗೆ ಬಂದಂತಹ ಬಾತ್ಮಿಯ ಮೇರೆಗೆ ತನ್ನ ಸಿಬ್ಬಂದಿಗಳು ಹಾಗೂ ಪಂಚರೊಂದಿಗೆ ದಿನಾಂಕ: 02.12.1992 ರಂದು ಲಾಂಚಿನ ಮೇಲೆ ಕಾರವಾರ ತಾಲ್ಲೂಕಿನ ಬಿಣಗಾದಲ್ಲಿರುವ ಕಾಮತ ಬೀಚ್ ಸಮುದ್ರ ಕಿನಾರೆಯಲ್ಲಿ ಕಾಯುತ್ತಾ ಕುಳಿತಿದ್ದಾಗ ಬೆಳಿಗ್ಗೆ ಸುಮಾರು 7.00 ಗಂಟೆಯ ಸಮಯಕ್ಕೆ ಗೋವಾ ತರ್ಫಿನಿಂದ ಬಿಣಗಾ ತರ್ಫಿಗೆ ಒಂದು ತಾಂತ್ರಿಕ ನಾಡದೋಣಿಯು ಬರುತ್ತಿರುವುದನ್ನು ನೋಡಿ ಸಂಶಯದಿಂದ ಸದರಿ ದೋಣಿಯನ್ನು ಹಿಡಿಯಲು ಬೆನ್ನಟ್ಟಿದಾಗ ಅದರ ಚಾಲಕರು ಫಿರ್ಯಾದಿಕಡೆಯವರನ್ನು ನೋಡಿ ಸದರಿ ನಾಡದೋಣಿಯನ್ನು ಸಮುದ್ರದಡಕ್ಕೆ ಬಿಟ್ಟು, ಓಡತೊಡಗಿದಾಗ ಒಬ್ಬಾತನನ್ನು ಹಿಡಿದು, ಉಳಿದವರೆಲ್ಲರ ಹೆಸರನ್ನು ಪಡೆದು ನಂತರ ಹಿಡಿದಂತಹ ಆರೋಪಿಗೆ ದೋಣಿಯ ಹತ್ತಿರ ತಂದು ಸದರಿ ದೋಣಿಯನ್ನು ತಪಾಸಣೆ ಮಾಡಲಾಗಿ, ಅದರೊಳಗೆ 34 ಪ್ಲಾಸ್ಟಿಕ್ ಕ್ಯಾನುಗಳು ಇದ್ದದ್ದು ಕಂಡು ಬಂದು, ಅವುಗಳನ್ನು ಮೂಸಿ ನೋಡಲಾಗಿ, ಗೋವಾ ತೆಂಗಿನ ಸರಾಯಿಯ ವಾಸನೆ ಬರುತ್ತಿದ್ದರಿಂದ ಸದರಿ ಕ್ಯಾನುಗಳಿಂದ 750 ಮಿ.ಲೀ.ನಂತೆ 34 ಬಾಟ್ಲಿಗಳಲ್ಲಿ ರಾಸಾಯನಿಕ ಪರೀಕ್ಷೆಗಾಗಿ ಮಾದರಿ ತೆಗೆದು ನಂತರ ಅದೇ ದೋಣಿಯಲ್ಲಿ ಇದ್ದಂತಹ 12 ಗೋಣಿ ಚೀಲಗಳನ್ನು ಬಿಚ್ಚಿ ನೋಡಲಾಗಿ, ಅವುಗಳ ಪೈಕಿ ಒಂದನೆ ಪೊಟ್ಲೆಯಲ್ಲಿ 180 ಮಿ.ಲೀ.ನ 80 ರಂತೆ ಡಾಕ್ಟರ್ ಇಂಟರ್ ನ್ಯಾಶನಲ್ ಬ್ರ್ಯಾಂಡಿ ಬಾಟ್ಲಿಗಳು, ಎರಡನೇ ಪೊಟ್ಲೆಯಲ್ಲಿಯೂ ಸಹ 180 ಮಿ.ಲೀ.ನ 80 ಡಾಕ್ಟಕ್ ಇಂಟರ್ ನ್ಯಾಶನಲ್ ಬ್ರ್ಯಾಂಡಿ ಬಾಟ್ಲಿಗಳು, ಮೂರನೇ ಪೊಟ್ಲೆಯಲ್ಲಿ 375 ಮಿ.ಲೀ.ನ 46 ಬ್ಲ್ಯೂಸ್ಟಾರ್ ಕೊಕೊನಟ್ ಫೆನ್ನಿ ಬಾಟ್ಲಿಗಳು, ನಾಲ್ಕನೇ ಪೊಟ್ಲೆಯಲ್ಲಿಯೂ ಸಹ 375 ಮಿ.ಲೀ.ನ 46 ಬ್ಲ್ಯೂಸ್ಟಾರ್ ಕೊಕೊನಟ್ ಫೆನ್ನಿ ಬಾಟ್ಲಿಗಳು, ಐದನೇ ಪೊಟ್ಲೆಯಲ್ಲಿ 180 ಮಿ.ಲೀ.ನ 80 ಡಾಕ್ಟರ್ ಇಂಟರ್ ನ್ಯಾಶನಲ್ ಬ್ರ್ಯಾಂಡಿ ಬಾಟ್ಲಿಗಳು ಹಾಗೂ ಆರನೇ ಪೊಟ್ಲೆಯಲ್ಲಿಯೂ ಸಹ 180 ಮಿ.ಲೀ.ನ 80 ಡಾಕ್ಟರ್ ಇಂಟರ್ ನ್ಯಾಶನಲ್ ಬ್ರ್ಯಾಂಡಿ ಬಾಟ್ಲಿಗಳು, ಏಳನೇ ಪೊಟ್ಲೆಯಲ್ಲಿ 180 ಮಿ.ಲೀ.ನ 60 ಡಾಕ್ಟರ್ ಇಂಟರ್ ನ್ಯಾಶನಲ್ ಬ್ರ್ಯಾಂಡಿ ಬಾಟ್ಲಿಗಳು, ಎಂಟನೇ ಪೊಟ್ಲೆಯಲ್ಲಿ 375 ಮಿ.ಲೀ.ನ 47 ಫೈನ್‌ಎಪಲ್ ಬ್ಲ್ಯಾಂಡೆಡ್ ಫಾಮ ಫೆನ್ನಿ ಬಾಟ್ಲಿಗಳು, 9ನೇ ಪೊಟ್ಲೆಯಲ್ಲಿ 180 ಮಿ.ಲೀ.ನ 80 ಡಾಕ್ಟರ್ ಇಂಟರನ್ಯಾಶನಲ್ ಬ್ರ್ಯಾಂಡಿ ಬಾಟ್ಲಿಗಳು, 10ನೇ ಪೊಟ್ಲೆಯಲ್ಲಿಯೂ ಸಹ 180 ಮಿ.ಲೀ.ನ 80 ಡಾಕ್ಟರ್ ಇಂಟರ್ ನ್ಯಾಶನಲ್ ಬ್ರ್ಯಾಂಡಿ ಬಾಟ್ಲಿಗಳು, 11ನೇ ಪೊಟ್ಲೆಯಲ್ಲಿ 375 ಮಿ.ಲೀ.ನ 40 ಬ್ಲ್ಯೂಸ್ಟಾರ್ ಫೆನ್ನಿ ಬಾಟ್ಲಿಗಳು ಹಾಗೂ 12ನೇ ಪೊಟ್ಲೆಯಲ್ಲಿ 375 ಮಿ.ಲೀ.ನ 40 ಫೈನ್‌ಎಪಲ್ ಬ್ಲ್ಯಾಂಡೆಡ್ ಫಾಮ ಫೆನ್ನಿ ಬಾಟ್ಲಿಗಳು ಇದ್ದದ್ದು ಕಂಡುಬಂದಿದ್ದರಿಂದ, ಇವುಗಳನ್ನು ಸಾಗಿಸುವುದಕ್ಕಾಗಿ ಯಾವುದೇ ರೀತಿಯ ಪಾಸ್ ಅಥವಾ ಪರ್ಮಿಟ್ ಇಲ್ಲದಿದ್ದುದು ಕಂಡು ಬಂದಿದ್ದರಿಂದ, ಇವುಗಳನ್ನು ಜಪ್ತು ಮಾಡಿ, ಪ್ರತಿಯೊಂದು ಪೊಟ್ಲೆಯಿಂದ ಒಂದೊಂದು ಬಾಟ್ಲಿಯನ್ನು ರಾಸಾಯನಿಕ ಪರೀಕ್ಷೆಗಾಗಿ ಮಾದರಿ ತೆಗೆದು, ಜಪ್ತಿಯಾದ ಮುದ್ದೆ ಮಾಲುಗಳು ಹಾಗೂ ರಾಸಾಯನಿಕ ಪರೀಕ್ಷೆಗೆ ತೆಗೆದ ಬಾಟ್ಲಿಗಳಿಗೆ ಫಿರ್ಯಾದುದಾರರ ಹಾಗೂ ಪಂಚರ ಸಹಿಯುಳ್ಳ ಲೇಬಲ್ ಹಚ್ಚಿ, ಕಡಲು ಪಡೆ ಕಛೇರಿಯ ಮೊಹರಿನಿಂದ ಸೀಲ್ ಮಾಡಿ, ತಮ್ಮ ತಾಬಾಕ್ಕೆ ತೆಗೆದುಕೊಂಡೆವೆಂದೂ, ಸದರಿ ಜಪ್ತು ಮಾಲನ್ನು ಹೊತ್ತುತಂದಂತಹ ನಾಡದೋಣಿಯ 27 ಫೂಟ್ 10 ಇಂಚು ಉದ್ದವಿದ್ದು 4 ಫೂಟ್ ಅಗಲವಿದ್ದು, 26 ಇಂಚು ಎತ್ತರವಿದ್ದು, ಸದರಿ ನಾಡದೋಣಿಗೆ ಮಧ್ಯಂತರದಲ್ಲಿ 9 ಕಡೆಗಳಲ್ಲಿ ಹಲಗೆಗಳನ್ನು ಕೂಡಿಸಿದ್ದು, ಒಂದು ಬದಿಗೆ ಅದಕ್ಕೆ ಹೊಲಾಂಡಿಯನ್ನು ಕಟ್ಟಿದ್ದು, ಅದಕ್ಕೆ 25 ಎಚ್.ಪಿ.ಯ ಯಮಹಾ ಮಶೀನು ಸಂಖ್ಯೆ: ಇ-25 ಎಫ್‌ಕೆ, 6 ಎಚ್‌ಎಲ್ ಬಿ-11377 ನೇಯದನ್ನು ಸಹ ಪಂಚರ ಸಮಕ್ಷಮ ಜಪ್ತು ಮಾಡಿ, ತಾಬಾಕ್ಕೆ ತೆಗೆದುಕೊಂಡು ಪಂಚರ ಸಮಕ್ಷಮ ಪಂಚನಾಮೆ ತಯಾರಿಸಿ, ಸದ್ರಿ ಮದ್ಯಸಾರದ ಸ್ವತ್ತುಗಳು ಹಾಗೂ ಬೋಟನ್ನು ಮುಂದಿನ ಕ್ರಮದ ಕುರಿತು ಜಪ್ತು ಮಾಡಿ ಕಾರವಾರ ಗ್ರಾಮೀಣ ಪೊಲೀಸ್ ಠಾಣೆಗೆ ಫಿರ್ಯಾದು ನೀಡಿದ ಪ್ರಕಾರ, ಪ್ರಥಮ ಮಾಹಿತಿ ವರದಿ ನಂ. 131/1992 ರ ಪ್ರಕಾರ ದಿನಾಂಕ: 02.12.1992 ರಂತೆ ಪ್ರಕರಣವನ್ನು ದಾಖಲಿಸಿದ್ದು, ಇದು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 34ರ ಪ್ರಕಾರ ಶಿಕ್ಷಾರ್ಹವಾಗಿರುವುದಾಗಿ ತಿಳಿಸಿ, ಜಪ್ತಾದ ಮುದ್ದೆಮಾಲನ್ನು (ಮಾದರಿ ಸೀಸೆಗಳನ್ನು ಹೊರತುಪಡಿಸಿ) ಬೋಟಿನ ಸಹಿತ ಹಾಗೂ ಗುನ್ಹೆಗೆ ಸಂಬಂಧಿಸಿದ ದಾಖಲಾತಿಗಳನ್ನು ಈ ಪ್ರಾಧಿಕಾರದ ಮುಂದೆ ಹಾಜರುಪಡಿಸಿ ಕರ್ನಾಟಕ ಅಬಕಾರಿ ಕಾಯ್ದೆಯ ಕಲಂ 43ಎ(2)ರ ಪ್ರಕಾರ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ವರದಿ ಸಲ್ಲಿಸಿರುತ್ತಾರೆ.

3. ದಿನಾಂಕ: 23.12.1992 ರಂದು ಶಂಕರ ನಾರಾಯಣ ಬೊಬ್ರುಕರ ಸಾ: ಅಂಬೆಕೊಡಾರ ಇವರು ಈ ಪ್ರಾಧಿಕಾರದಲ್ಲಿ ತನ್ನ ಅರ್ಜಿಯನ್ನು ಸಲ್ಲಿಸುತ್ತಾ, ಪ್ರಕರಣದಲ್ಲಿ ಜಪ್ತಿಯಾದ ದೋಣಿಯ ಮಶೀನು ತನ್ನ ಮಾಲೀಕತ್ವದಾಗಿದ್ದು, ಅದನ್ನು ತಾನು ತನ್ನ ಮಾವನವರಿಗೆ

ಸಂಬಂಧಿಸಿದ ಶೆಡ್‌ನಲ್ಲಿ ಇಟ್ಟಿದ್ದೆನೆಂದೂ, ಆದರೆ ಅದನ್ನು ದೋಣಿಗೆ ಕೂಡಿಸಿರಲಿಲ್ಲವೆಂದೂ, ದಿನಾಂಕ: 21.12.1992 ರಂದು ಬಹಳ ದಿನಗಳ ನಂತರ ಮಲ್ಪೆಯಿಂದ ತಾನು ವಾಪಸಾದಾಗ ತನ್ನ ಮಶೀನು ಕಾಣೆಯಾಗಿರುವುದು ಮತ್ತು ಅದನ್ನು ಕಾರವಾರ ಗ್ರಾಮೀಣ ಪೊಲೀಸ್ ಠಾಣೆಯವರು ಜಪ್ತು ಮಾಡಿರುವುದು ಕಂಡು ಬಂದಿತೆಂದೂ, ಬಿಣಗಾದ ಸಮುದ್ರದಂಡೆಯನ್ನು ಕೆಲವರು ಗೋವಾ ರಾಜ್ಯದ ಮದ್ಯದ ಸಾಗಾಣಿಕೆಗಾಗಿ ಬಳಸಿಕೊಳ್ಳುತ್ತಿದ್ದಾರೆಂದು ತನ್ನ ಮಾವನವರು ಸದರಿ ಇಂಜೀನಿನ ಬಗ್ಗೆ ಕಾಳಜಿ ವಹಿಸಿ, ಅದನ್ನು ಕಾಯುತ್ತಿದ್ದರೆಂದೂ, ಈ ಗುನ್ನೆಯಲ್ಲಿ ಜಪ್ತು ಮಾಡಿರುವ ದೋಣಿಯು ತನಗೆ ಸಂಬಂಧಿಸಿಲ್ಲವೆಂದೂ, ಸದರಿ ಮಶೀನನ್ನು ಬಳಸಿರುವ ಬಗ್ಗೆ ತನ್ನ ತಿಳುವಳಿಕೆಗೆ ಬಂದಿರಲಿಲ್ಲವೆಂದೂ, ಆರೋಪಿಗಳು ಸದರಿ ಇಂಜೀನನ್ನು ಹೊರಗಡೆ ಒಯ್ಯುವ ಬಗ್ಗೆ ತನ್ನ ಮಾವನವರಿಗೂ ಗೊತ್ತಿರಲಿಲ್ಲವೆಂದೂ, ಇದರ ಬಗ್ಗೆ ತಾನು ಮತ್ತು ತನ್ನ ಮಾವನು ಎಲ್ಲಾ ರೀತಿಯ ಮುಂಜಾಗೃತಾ ಕ್ರಮವನ್ನು ಕೈಕೊಂಡಿದ್ದೆವೆಂದೂ, ಕಾರಣ ಸದರಿ ಮಶೀನನ್ನು ಬ್ಯಾಂಕ್ ಗ್ಯಾರಂಟಿಯ ಆಧಾರದ ಮೇಲೆ ಮಧ್ಯಂತರ ವಶಕ್ಕೆ ಬಿಡುಗಡೆ ಮಾಡಬೇಕೆಂದು ವಿನಂತಿಸಿದ್ದರು.

4. ಆನಂತರ ದಿನಾಂಕ: 3.4.1993 ರಂದು ಕೃಷ್ಣಾ ಲಿಂಗಾ ಹರಿಕಂತ್ರಾ ಸಾ: ಬಿಣಗಾ ಇವರು ತನ್ನ ವಕೀಲರಾದ ಶ್ರೀ ಎನ್. ಎಸ್. ಭಟ್ ಇವರ ಮೂಲಕ ಅರ್ಜಿ ಸಲ್ಲಿಸುತ್ತಾ, ಈ ಪ್ರಕರಣದಲ್ಲಿ ಜಪ್ತಿಯಾದ ದೋಣಿಯು ತನ್ನ ಮಾಲೀಕತ್ವದ್ದಾಗಿದ್ದು, ಅದನ್ನು ಬಿಣಗಾದಲ್ಲಿರುವ ತನ್ನ ಸಹೋದರನ ಶೆಡ್‌ನಲ್ಲಿ ಇಡಲಾಗಿತ್ತೆಂದೂ, ಅದನ್ನು ಪೊಲೀಸ್‌ರು ಜಪ್ತು ಮಾಡಿದರೆಂದೂ, ಸದರಿ ದೋಣಿಯನ್ನು ಮೀನು ಹಿಡಿಯುವುದಕ್ಕಾಗಿ ಮಾತ್ರ ಉಪಯೋಗಿಸಲಾಗುತ್ತಿದ್ದು, ಬೇರೆ ಯಾವುದೇ ಉದ್ದೇಶಕ್ಕಾಗಿ ಉಪಯೋಗಿಸುತ್ತಿರಲಿಲ್ಲವೆಂದೂ, ಅನಧಿಕೃತ ಸ್ವತ್ತುಗಳನ್ನು ಸಾಗಿಸುವುದಕ್ಕಾಗಿ ಈ ದೋಣಿಯನ್ನು ಬಳಸಿದ್ದರಿಂದ ಜಪ್ತು ಮಾಡಿರುವುದಾಗಿ ಫಿರ್ಯಾದಿ ಕಡೆಯವರು ಸುಳ್ಳು ಪ್ರಕರಣವನ್ನು ದಾಖಲಿಸಿದ್ದಾರೆಂದು, ಆದ ಕಾರಣ ಸದರಿ ದೋಣಿಯನ್ನು ಮಧ್ಯಂತರ ವಶಕ್ಕೆ ಬಿಡುಗಡೆ ಮಾಡಬೇಕೆಂದು ವಿನಂತಿಸಿದ್ದರು.

5. ಈ ಪ್ರಕರಣದಲ್ಲಿ ತೆಗೆಯಲಾದ ಮಾದರಿ ಸೀಸೆಗಳ ಬಗೆಗಿನ ರಾಸಾಯನಿಕ ವಿಶ್ಲೇಷಣಾ ವರದಿಯನ್ನು ತನಿಖಾಧಿಕಾರಿಗಳು ದಿನಾಂಕ: 23.08.1995 ರಂದು ಈ ಪ್ರಾಧಿಕಾರದಲ್ಲಿ ಹಾಜರುಪಡಿಸಿದ್ದು, ದಿನಾಂಕ: 29.03.1993 ರಂದು ಪ್ರಾದೇಶಿಕ ಸಹಾಯಕ ರಾಸಾಯನಿಕ ತಜ್ಞರು, ಧಾರವಾಡ ವಲಯ ಇವರು ಈ ಪ್ರಕರಣದಲ್ಲಿ ತೆಗೆಯಲಾದ ಮಾದರಿ ಸೀಸೆಗಳಲ್ಲಿ "ಆಲ್ಕೋಹಾಲ್ ಪತ್ತೆ ಆಗಿರುತ್ತದೆ." ಎಂದು ವರದಿಸಿರುತ್ತಾರೆ.

6. ಪ್ರಕರಣದಲ್ಲಿ ಜಪ್ತಿಯಾದ ಸ್ವತ್ತುಗಳನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬುದಕ್ಕಾಗಿ ದಿನಾಂಕ: 26.08.1995 ರಂದು ಪ್ರಕರಣದಲ್ಲಿನ ಎಲ್ಲಾ ಆರೋಪಿಗಳಿಗೆ ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43ಬಿ(1) (ಎ) ರನ್ವಯ ಕಾರಣಕೇಳಿ ನೋಟಿಸನ್ನು ಪ್ರಕರಣ ದಾಖಲಿಸಿದ ಅಧಿಕಾರಿಗಳ ಮೂಲಕ ಜಾರಿ ಮಾಡಿಸಲಾಗಿ, ಈ ನೋಟೀಸಿಗೆ ಬಾಳಾ ಎಸ್. ಗಿರಪ್ ಎಂಬಾತನನ್ನು ಹೊರತುಪಡಿಸಿ, ಯಾರೂ ತನ್ನ ಸಮಜಾಯಿಷಿಯನ್ನು ಸಲ್ಲಿಸಿರುವುದಿಲ್ಲ. ನಂತರ ದಿನಾಂಕ: 9.06.1999 ರಂದು ಅರ್ಜಿದಾರರಾದ ಕೃಷ್ಣಾ ಲಿಂಗಾ ಹರಿಕಂತ್ರ ಇವರಿಗೆ ಇನ್ನೊಮ್ಮೆ ಕಾರಣಕೇಳಿ ನೋಟೀಸನ್ನು ನೋಂದಾಯಿತ ಅಂಚೆ ಮೂಲಕ ಕಳುಹಿಸಲಾಗಿ ಅದನ್ನು ಅವರು ದಿನಾಂಕ: 26.06.1999 ರಂದು ಸ್ವೀಕರಿಸಿದ್ದು ತನ್ನ ಸಮಜಾಯಿಷಿಯನ್ನು ಸಲ್ಲಿಸಿರುವುದಿಲ್ಲ.

7. ದಿನಾಂಕ: 31.01.1996 ರಂದು ಅರ್ಜಿದಾರರ ಅರ್ಜಿಗಳನ್ನು ಪರಿಗಣಿಸಿ, ಈ ಪ್ರಕರಣದಲ್ಲಿ ಜಪ್ತಿಯಾದಂತಹ ದೋಣಿ ಹಾಗೂ ಮಶೀನನ್ನು ರೂ. 31,000/- ಗಳ ಮೌಲ್ಯದ ಬ್ಯಾಂಕ್ ಗ್ಯಾರಂಟಿಯನ್ನು ಪಡೆದು ಕೃಷ್ಣಾ ಲಿಂಗಾ ಹರಿಕಂತ್ರ ಇವರಿಗೆ ಈ ಪ್ರಾಧಿಕಾರದ ಆದೇಶ ಸಂಖ್ಯೆ: ಅಬಕಾರಿ/ಸಿಆರ್‌ಎಂ/ಡಿಟಿಸಿಆರ್/138/1992-93 ರಂತೆ ಮಧ್ಯಂತರ ವಶಕ್ಕೆ ಬಿಡುಗಡೆ ಮಾಡಲಾಗಿರುತ್ತದೆ.

8. ಈ ಪ್ರಕರಣವನ್ನು ದಾಖಲಿಸಿ 4 ವರ್ಷಗಳು ಕಳೆದ ತರುವಾಯವೂ ಜಪ್ತಿಯಾದ ಗೋವಾ ಸರಾಯಿ ಮತ್ತು ಮದ್ಯದ ಸ್ವತ್ತುಗಳು ತನ್ನದೆಂದು ಕೋರಿ ಯಾರೂ ತನ್ನ ಹಕ್ಕನ್ನು ಸ್ಥಾಪಿಸಿ ಅರ್ಜಿಯನ್ನು ಈ ಪ್ರಾಧಿಕಾರದಲ್ಲಿ ಸಲ್ಲಿಸದಿದ್ದ ಕಾರಣಕ್ಕಾಗಿ ಕ.ಅ. ಕಾಯ್ದೆ 1965 ಕಲಂ 43-ಎ (2) ರನ್ವಯ ದಿನಾಂಕ: 24.02.1997 ರಂದು ಸದರಿ ಮದ್ಯಸಾರದ ಸ್ವತ್ತುಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿ ವಿಲೇವಾರಿಗೆ ಆದೇಶಿಸಲಾಗಿರುತ್ತದೆ.

9. ಲಭ್ಯವಿರುವ ದಾಖಲೆಗಳು ಹಾಗೂ ರಾಸಾಯನಿಕ ವಿಶ್ಲೇಷಣಾ ವರದಿಯನ್ನಾಧರಿಸಿ ವಾಹನದ ಮುಟ್ಟುಗೋಲು ನಡಾವಳಿಯನ್ನು ಪ್ರಾರಂಭಿಸುವ ಮುನ್ನ ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43 ಬಿ-1 (ಸಿ) ಪ್ರಕಾರ ವಿಚಾರಣೆಯನ್ನು ಕೈಗೆತ್ತಿಕೊಂಡು ಫಿರ್ಯಾದುದಾರರು ಸಲ್ಲಿಸಿರುವ ದಾಖಲೆಯ ಪ್ರತಿಗಳನ್ನು ಸಿ.ಆರ್.ಪಿ.ಸಿ. ಕಲಂ 207 ರಂತೆ ಅರ್ಜಿದಾರರಿಗೆ ನೀಡಲಾಯಿತು. ನಂತರ ಕರ್ನಾಟಕ ಅಬಕಾರಿ ಕಾಯ್ದೆ ಕಲಂ 34 ರಂತೆ ಹೊರಿಸಿದ ಆರೋಪದ ಬಗ್ಗೆ ಓದಿ ವಿವರಿಸಲಾಗಿ ಅರ್ಜಿದಾರರು ತನ್ನ ಮೇಲೆ ಹೊರಿಸಿದ ಆರೋಪಗಳನ್ನು ಅಲ್ಲಗಳೆದಾಗ ಅಭಿಯೋಜನೆ ಪಕ್ಷದವರು ಎದುರುದಾರರ ವಿರುದ್ಧ ಆರೋಪಗಳನ್ನು ಸಾಬೀತುಪಡಿಸಲು ಪಿ.ಡಬ್ಲ್ಯೂ-1 ನೆಯವರನ್ನು ಸಾಕ್ಷಿದಾರರೆಂದು ವಿಚಾರಣೆ ಮಾಡಿಸಿ ನಿಶಾನೆ ಪಿ-1 ರಿಂದ ಪಿ-3 ರವರೆಗೆ ದಾಖಲೆಗಳನ್ನು ಗುರ್ತಿಸಿಕೊಂಡು ಮುದ್ದೆಮಾಲುಗಳನ್ನು ಮು.ಮಾ-1 ರಿಂದ 2 ರವರೆಗೆ ಗುರ್ತಿಸಿಕೊಂಡಿರುತ್ತಾರೆ. ಈ ಪ್ರಕರಣದ ಪಂಚ ಸಾಕ್ಷಿದಾರರಿಬ್ಬರಿಗೂ ಕಳೆದ 6 ವರ್ಷಗಳಿಂದ ನೋಟೀಸುಗಳನ್ನು ಕಳುಹಿಸಲಾದರೂ ಸಹ ಅವರುಗಳು ಪ್ರಾಧಿಕಾರದಲ್ಲಿ ಹಾಜರಾಗದೇ ಇದ್ದುದರಿಂದ ಸದರಿಯವರ ವಿಚಾರಣೆಯನ್ನು ಕೈಬಿಡಲಾಗಿದೆ.

10. ಆದಾಗ್ಯೂ ಎದುರುದಾರರ ವಿರುದ್ಧ ಸಾಕಷ್ಟು ಸಾಕ್ಷ್ಯಾಧಾರಗಳು ಇದ್ದದ್ದು ಕಂಡು ಬಂದಿದ್ದರಿಂದ ದಂಡ ಪ್ರಕ್ರಿಯೆ ಸಂಹಿತೆ ಕಲಂ-313 ರಡಿಯಲ್ಲಿ ಅರ್ಜಿದಾರರಾದ ಕೃಷ್ಣ ಲಿಂಗಾ ಹರಿಕಂತ್ರ ಇವರ ಹೇಳಿಕೆಯನ್ನು ಡಿ.ಡಬ್ಲ್ಯೂ-1 ರಂತೆ ಪಡೆದುಕೊಳ್ಳಲಾಯಿತು. ಯಾವುದೇ ನಿಶಾನೆಗಳನ್ನು ಗುರ್ತಿಸಿಕೊಂಡಿರುವುದಿಲ್ಲ. ಈ ಪ್ರಕರಣದ ಇನ್ನೊಬ್ಬ ಅರ್ಜಿದಾರರಾದ ಶಂಕರ ನಾರಾಯಣ ಬೊಬ್ರುಕರ ಇವರಿಗೂ ಸಹ ಸಾಕಷ್ಟು ಬಾರಿ ನೋಟೀಸುಗಳನ್ನು ಕಳುಹಿಸಲಾದರೂ ಸಹ ಅವರು ಈ ಪ್ರಾಧಿಕಾರದಲ್ಲಿ ಹಾಜರಾಗಿ ತನ್ನ ಸಾಕ್ಷಿಯನ್ನು ನುಡಿದಿರುವುದಿಲ್ಲ.

11. ಈ ಪ್ರಕರಣದಲ್ಲಿ ಮಧ್ಯಂತರ ವಶಕ್ಕೆ ಬಿಡುಗಡೆ ಮಾಡಲಾದ ದೋಣಿ ಹಾಗೂ ಮಶೀನನ್ನು ಹಾಜರುಪಡಿಸಲು ಕೃಷ್ಣ ಲಿಂಗ ಹರಿಕಂತ್ರ ಇವರಿಗೆ ನೋಟೀಸನ್ನು ಕಳುಹಿಸಲಾಗಿ ಒಮ್ಮೆಯೂ ಸಹ ಹಾಜರು ಪಡಿಸಿರುವುದಿಲ್ಲ. ಇದರಿಂದಾಗಿ ಪ್ರಾಧಿಕಾರದ ಮಧ್ಯಂತರ ಆದೇಶದಲ್ಲಿನ ಶರತ್ತುಗಳನ್ನು ಅರ್ಜಿದಾರರು ಉಲ್ಲಂಘಿಸಿರುವುದು ಸ್ಪಷ್ಟವಾಗಿ ಕಂಡುಬರುತ್ತದೆ.

12. ಸರ್ಕಾರದ ಪರವಾಗಿ ಮಾನ್ಯ ಅಭಿಯೋಗ ಸಹಾಯಕ ನಿರ್ದೇಶಕರು, ಕಾರವಾರ ರವರು ಹಾಗೂ ಅರ್ಜಿದಾರರ ಪರವಾಗಿ ಶ್ರೀ ಎನ್. ಎಸ್. ಭಟ್, ವಕೀಲರು ಕಾರವಾರ ರವರು ಮಂಡಿಸಿದ ವಾದ ವಿವಾದಗಳನ್ನು ಆಲಿಸಲಾಯಿತು. ಕಡತದಲ್ಲಿ ಲಭ್ಯವಿರುವ ದಾಖಲೆಗಳನ್ನು ಅವಲೋಕಿಸಲಾಯಿತು. ಉಭಯತರ ಪಕ್ಷದವರು ನುಡಿದಿರುವ ಸಾಕ್ಷ್ಯಗಳ ಆಧಾರದ ಮೇಲೆ ಮುಂದಿನ ಆದೇಶವನ್ನು ಹೊರಡಿಸುವ ಮುನ್ನ ಈ ಕೆಳಗಿನ ವಿವಾದಾಂಶಗಳಿಗೆ ಉತ್ತರವನ್ನು ಪಡೆಯುವುದು ಸೂಕ್ತವೆಂದು ಕಂಡು ಬರುತ್ತದೆ.

**13. ವಿವಾದಾಂಶಗಳು:**

1. ದಿನಾಂಕ: 02.12.1992 ರಂದು ಬೆಳಿಗ್ಗೆ ಸುಮಾರು 7.00 ಗಂಟೆಯ ಸಮಯಕ್ಕೆ ಕಾರವಾರ ತಾಲೂಕಿನ ಬಿಣಗಾದ ಸಮುದ್ರದ ದಂಡೆಯಲ್ಲಿ ಒಂದು ಮಶೀನು ಕೂಡಿಸಿದಂತಹ ದೋಣಿಯಲ್ಲಿ ಅಕ್ರಮವಾಗಿ 12 ಪೊಟ್ಲೆಗಳಲ್ಲಿ ಗೋವಾ ರಾಜ್ಯದ ತಯಾರಿಕೆಯ ಮದ್ಯದ ಹಾಗೂ ಫೆನ್ನಿಯ ಸೀಸೆಗಳನ್ನು ಅನಧಿಕೃತವಾಗಿ ಈ ಪ್ರಕರಣದ 9 ಜನ ಆರೋಪಿಗಳು ಸಾಗಿಸುತ್ತಿದ್ದರೇ?
2. ಘಟನೆ ಸಂಭವಿಸಿದಾಗ ದೋಣಿ ಮತ್ತು ಮಶೀನು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ಆ ದೋಣಿ ಮತ್ತು ಮಶೀನಿನ ಮಾಲೀಕರಿಗೆ ಅಥವಾ ಅವರ ಏಜೆಂಟರ ಗಮನಕ್ಕೆ ಬಾರದೇ ಹಾಗೂ ಅವರೆಲ್ಲರಿಗೂ ಅರಿವಿಲ್ಲದಂತೆ ಮತ್ತು ಅವರು ಶಾಮೀಲಾಗದೇ ಈ ದೋಣಿಯಲ್ಲಿ ಅಕ್ರಮವಾಗಿ ಗೋವಾ ಫೆನ್ನಿ ಮತ್ತು ಮದ್ಯವು ಸಾಗಾಣಿಕೆಯಾಗಿದೆ ಎಂಬ ಅಂಶವನ್ನು ಇವರೆಲ್ಲರೂ ಈ ಪ್ರಾಧಿಕಾರದಲ್ಲಿ ತೃಪ್ತಿಕರವಾಗಿ ನಿರೂಪಿಸಿರುತ್ತಾರೆಯೇ?
3. ದೋಣಿಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಿದೆಯೇ?

ಅಂಶ-1 : ಸಕಾರಾತ್ಮಕವಾಗಿ

ಅಂಶ-2 : ನಕಾರಾತ್ಮಕವಾಗಿ

ಅಂಶ-3 : ಸಕಾರಾತ್ಮಕವಾಗಿ

**ಕಾರಣಗಳು:**

14. ಒಂದನೆಯ ವಿವಾದಾಂಶವನ್ನು ರುಜುವಾತುಪಡಿಸಲು ಅಭಿಯೋಜಕರ ಪರ ಸಾಕ್ಷಿದಾರರಾದ ಈ ಪ್ರಕರಣದ ಫಿರ್ಯಾದುದಾರರಾದ ಎನ್. ಅಪ್ಪುಶೆಟ್ಟಿ, ಪಿ.ಎಸ್.ಐ. ರವರು ದಿನಾಂಕ: 19.7.1996 ರಂದು ಈ ಪ್ರಾಧಿಕಾರದಲ್ಲಿ ಹಾಜರಾಗಿ ಪಿಡಬ್ಲ್ಯೂ-1 ರಂತೆ ತನ್ನ ಸಾಕ್ಷ್ಯವನ್ನು ನುಡಿಯುತ್ತಾ, ಮಾನ್ಯ ಎಡಿಪಿಯವರ ಮುಖ್ಯ ವಿಚಾರಣೆಗೆ ಸರಿಯಾಗಿಯೇ ಉತ್ತರಿಸುತ್ತಾ, ಪಂಚನಾಮೆಯಲ್ಲಿನ ಎಲ್ಲಾ ಅಂಶಗಳನ್ನು ಪ್ರಬಲವಾಗಿ ಸಮರ್ಥಿಸಿಕೊಂಡಿರುತ್ತಾರೆ. ನಂತರ ಅರ್ಜಿದಾರರ ಪರ ವಕೀಲರ ಪಾಟಿ ಸವಾಲಿನಲ್ಲಿ ಕಾಮತ ಬೀಚ್‌ನಿಂದ 30 ಫೂಟುಗಳ ಅಂತರದಿಂದ ಬೋಟನ್ನು ನೋಡಿದೆನೆಂದೂ, ಕಾಮತ ಬೀಚ್ ಹತ್ತಿರ ತಮ್ಮನ್ನು ನೋಡಿ ಕೂಡಲೇ ಆರೋಪಿಗಳು ಹಿನ್ನೀರಿನಲ್ಲಿ ಹಾರಿದರೆಂದೂ, ತಾವು ಸಮುದ್ರದಲ್ಲಿ ಲಾಂಚ್‌ನಲ್ಲಿ ಇದ್ದೆವೆಂದೂ, ಪಂಚನಾಮೆಗೆ ಸಹಿ ಮಾಡಿದವರು ಅಬಕಾರಿ ಗುತ್ತಿಗೆದಾರರ ಕೆಲಸದವರೆಂಬುವುದು ತಮಗೆ ಗೊತ್ತಿಲ್ಲವೆಂದೂ, ಪಂಚನಾಮೆಯನ್ನು ಬೆಳಿಗ್ಗೆ 7-15ಕ್ಕೆ ಪ್ರಾರಂಭಿಸಿ, 8-20ಕ್ಕೆ ಮುಕ್ತಾಯಗೊಳಿಸಿದೆವೆಂದೂ, ರೇಡಿಗೆ ಹೋಗುವಾಗ ಖಾಲಿ ಬಾಟ್ಲಿ, ಶೀಲುಗಳನ್ನು ತೆಗೆದುಕೊಂಡೇ ಹೋಗುತ್ತೇವೆಂದೂ, ಪಂಚನಾಮೆಯಲ್ಲಿ ನಮೂದಿಸಿದ ಎಲ್ಲಾ ಸ್ಯಾಂಪಲ್ ಬಾಟ್ಲಿಗಳ ಮೇಲೆ ಪಂಚರ ಸಹಿ ಇದೆ ಎಂದು, ಸ್ಯಾಂಪಲ್ ಬಾಟ್ಲಿಗಳ ಮೇಲೆ ಸಹಿ ಮಾಡುವವರೆಗೆ ಒಂದು ತಾಸು ಆಗಿರುತ್ತದೆಂದೂ, ಗುನ್ಹೆಯ ಕಾಲಕ್ಕೆ ಎಲ್ಲಾ ಆರೋಪಿತರ ಹೆಸರನ್ನು ಪ್ರ.ಮಾ.ವರದಿಯಲ್ಲಿ ನಮೂದಿಸಿದೆ ಎಂದು ಕಾಮತ ಬೀಚ್‌ನಿಂದ ಬಿಣಗಾ 5 ಕಿ.ಮೀ. ಆಗುತ್ತದೆಂದೂ, ದಾಳಿಗೆ ಬೆಳಗಿನ ಜಾವ 5-00 ಗಂಟೆಗೆ ಹೋಗಿದ್ದೇವೆಂದೂ, ಪೊಲೀಸ್ ಠಾಣೆಗೆ ಫಿರ್ಯಾದು ಕೊಡುವಾಗ ಸಂಜೆ 5-15 ಆಗಿತ್ತೆಂದೂ, ಈ ಪಂಚನಾಮೆಗೆ ಸಹಿ ಮಾಡಿರುವವರು ಅಬಕಾರಿ ಇಲಾಖೆಯ ಸರಾಯಿ ಮಾರುವ ಖಾಯಂ ಪಂಚರು ಎಂಬುದು ತನಗೆ ಗೊತ್ತಿಲ್ಲವೆಂದೂ, ಆದರೂ ಸಹ ದಾಳಿಗೆ ಹೋಗಿಲ್ಲ ಮತ್ತು ಪಂಚನಾಮೆ ಮಾಡಿಲ್ಲ ಎಂಬುದು ಸುಳ್ಳೆಂದೂ, ಕ್ರಿಮಿನಲ್ ಕೇಸಿನಲ್ಲಿ ಆರೋಪಿಗಳು ಖುಲಾಸೆಯಾಗಿದ್ದ ಬಗ್ಗೆ ತನಗೆ ನೆನಪಿಲ್ಲವೆಂದೂ, ಗುನ್ಹೆಗೂ ಹಾಗೂ ಮಶೀನಿಗೂ ಯಾವುದೇ ಸಂಬಂಧವಿಲ್ಲ ಎನ್ನುವುದು ಸರಿಯಲ್ಲವೆಂದೂ ನುಡಿದಿರುತ್ತಾರೆ.

**ಇಲ್ಲಿ ಗಮನಿಸಬೇಕಾದ ಮುಖ್ಯ ಅಂಶವೇನೆಂದರೆ**

15. ಪಂಚರು ಅಬಕಾರಿ ಗುತ್ತಿಗೆದಾರರ ಕೆಲಸಗಾರರಾಗಿದ್ದಲ್ಲಿ ಅವರುಗಳು ಸುಳ್ಳು ಪಂಚನಾಮೆ ತಯಾರಿಸಿದ್ದಲ್ಲಿ ಆರೋಪಿಗಳಿಗೂ ಮತ್ತು ಇವರಿಗೂ ಯಾವ ರೀತಿಯ ವೈರತ್ವವಿದೆ ಎಂಬುದನ್ನು ಎದುರುದಾರರ ಪಕ್ಷದವರು ವಿವರಿಸಿರುವುದಿಲ್ಲ. ಪಂಚನಾಮೆ ಪ್ರಾರಂಭಿಸಿದ ಮತ್ತು ಮುಕ್ತಾಯಗೊಳಿಸಿದ ಅವಧಿಯನ್ನು ಪಿ.ಡಬ್ಲ್ಯೂ-1 ರವರು ಪಂಚನಾಮೆಯಂತೆ ಸರಿಯಾಗಿ ನುಡಿದಿರುತ್ತಾರೆ. ಖಚಿತವಾದ ಸುಳಿವಿನ ಮೇರೆಗೆ ಈ ದಾಳಿಯನ್ನು ನಡೆಸಿದ್ದರಿಂದ ಜೊತೆಯಲ್ಲಿ ಖಾಲಿ ಸೀಸೆ ಮತ್ತು ಚೀಲಗಳನ್ನು ತೆಗೆದುಕೊಂಡು ಹೋದದ್ದನ್ನು ಅಲ್ಲಗಳೆಯಲು ಬರುವುದಿಲ್ಲ. ಸ್ಯಾಂಪಲ್ ಬಾಟ್ಲಿಗಳ ಮೇಲೆ ಪಂಚರ ಸಹಿಯನ್ನು ತೆಗೆದುಕೊಳ್ಳುವವರೆಗೆ ಒಂದು ತಾಸಿನ ಸಮಯವಾಗಿರುವುದು ಪಂಚನಾಮೆಯಿಂದ ಕಂಡುಬರುತ್ತದೆ. ದಾಳಿಗೆ ಬೆಳಗಿನ ಜಾವ 5.00 ಗಂಟೆಗೆ ಹೊರಟಿಲ್ಲವೆಂಬುದರ ಬಗ್ಗೆ ಯಾವುದೇ ದಾಖಲೆ ಇಲ್ಲ. ಅದರಂತೆ ಸದರಿ ಪಂಚರು ಖಾಯಂ ಪಂಚರೆನ್ನುವ ಬಗ್ಗೆ ದಾಖಲೆ ಇರುವುದಿಲ್ಲ. ಕ್ರಿಮಿನಲ್ ಕೇಸಿನಲ್ಲಿ ಆರೋಪಿಗಳು ಖುಲಾಸೆಯಾಗಿದ್ದಲ್ಲಿ ಅದನ್ನು ಮುಟ್ಟುಗೋಲು ನಡಾವಳಿಯಲ್ಲಿ ಪರಿಗಣನೆಗೆ ತೆಗೆದುಕೊಳ್ಳಬೇಕಾಗಿಲ್ಲವೆಂದು ಮಾನ್ಯ ಉಚ್ಚ ನ್ಯಾಯಾಲಯ, ಬೆಂಗಳೂರು ರವರ

ತೀರ್ಪು ಡಿ.ಎಸ್. ವಿಜಯಕುಮಾರ ವಿರುದ್ಧ ಡೆಪ್ಯೂಟಿ ಕನ್ಸರ್ವೇಟರ್ ಆಫ್ ಫಾರೆಸ್ಟ್, ಹಾಸನ (ಐಎಲ್ಆರ್ 2002, ಕೆಎಆರ್ 1375) ನೇದರಲ್ಲಿ ಈ ಕೆಳಗಿನಂತೆ ತೀರ್ಪಾಗಿರುತ್ತದೆ.

The Contention of the owner of the seized vehicle that non-filing of a Criminal case or acquittal of the accused involved in illegal transport of forest produce, takes away the jurisdiction of the Authorised Officers to initiate confiscation proceedings under section 71A, hence confirmed the order of confiscation. ಆದುದರಿಂದ ಈ ಪ್ರಕರಣದಲ್ಲಿ ಜಪ್ತಿಯಾಗಿರುವ ಬೋಟಿನಲ್ಲಿ ಅಕ್ರಮವಾಗಿ ಗೋವಾ ರಾಜ್ಯದ ಫೆನ್ನಿ ಮತ್ತು ಮದ್ಯವನ್ನು ಸಾಗಿಸಿರುವುದನ್ನು ಅಭಿಯೋಜನೆ ಪಕ್ಷದವರು ಪ್ರಬಲವಾಗಿ ಸಮರ್ಥಿಸಿರುವುದು ಹಾಗೂ ಪಂಚನಾಮೆಯಲ್ಲಿನ ಎಲ್ಲಾ ಅಂಶಗಳನ್ನು ನಿಸ್ಸಂಶಯವಾಗಿ ನಿರೂಪಿಸಿರುವುದು ಕಂಡುಬಂದಿರುವುದರಿಂದ ಒಂದನೇ ವಿವಾದಾಂಶವನ್ನು ಸಕಾರಾತ್ಮಕವಾಗಿ ಉತ್ತರಿಸಲಾಗಿದೆ.

16. ದಿನಾಂಕ: 21.01.2004 ರಂದು ಅರ್ಜಿದಾರರಾದಂತಹ ಕೃಷ್ಣಾ ಲಿಂಗಾ ಹರಿಕಂತ್ರ ಇವರು ಈ ಪ್ರಾಧಿಕಾರದಲ್ಲಿ ಹಾಜರಾಗಿ ತಮ್ಮ ಸಾಕ್ಷ್ಯವನ್ನು ತನ್ನ ಪರ ವಕೀಲರ ಮುಖ್ಯ ವಿಚಾರಣೆಯಲ್ಲಿ ನುಡಿಯುತ್ತಾ, ತನ್ನ ವಾಸ್ತವ್ಯ ಬಿಣಗಾ ಆಗಿರುತ್ತದೆಂದೂ, ಸಮುದ್ರ ದಂಡೆಯಿಂದ ತನ್ನ ಮನೆಯು 2 ಕಿ.ಮೀ. ದೂರ ಆಗುತ್ತದೆಂದೂ, ತಾವು ಮೀನು ಹಿಡಿದು ಬಂದ ನಂತರ ಬೋಟನ್ನು ಸಮುದ್ರ ದಂಡೆಯ ಬದಿಗೆ ಇಡುತ್ತೇವೆಂದೂ, ದಂಡೆಯ ಮೇಲಿಡುತ್ತೇವೆಂದೂ, ಬೋಟನ್ನು ದಾನು ಎಂಬುವರ ಶೆಡ್ಡಿಗೆ ತಾಗಿ ಇಡುತ್ತಿದ್ದೇನೆಂದೂ, ಈ ಗುನ್ನೆಯಲ್ಲಿ ಜಪ್ತಿಯಾದಂತಹ ಬೋಟು ತನ್ನದಾಗಿರುತ್ತದೆಂದೂ, ಆದರೆ ಅದರ ಮಶೀನು ಮಾರನೆಯ ದಿವಸ ಶಂಕರನದೆಂದೂ ತಿಳಿದುಬಂತೆಂದೂ, ಬೋಟು ಮತ್ತು ಮಶೀನು ಪ್ರತ್ಯೇಕವಾಗಿತ್ತೆಂದೂ, ತನ್ನ ದೋಣಿಗೆ ಯಾವ ಮಶೀನು ಫಿಕ್ಸ್ ಮಾಡಿರಲಿಲ್ಲವೆಂದೂ, ದೋಣಿ ಬರುವಾಗ ಖಾಲಿ ಬರುತ್ತದೆಂದೂ, ಬೆಳಿಗ್ಗೆ ನಾವು ಸ್ಥಳಕ್ಕೆ ಹೋದಾಗ ಬೋಟು ಇರಲಿಲ್ಲವೆಂದೂ, ಬೋಟು ಇಲ್ಲದಿದ್ದಾಗ ಹುಡುಕಲಿಕ್ಕೆ ಶುರು ಮಾಡಿದೆವೆಂದೂ, ನಂತರ ಸೀ ಪೆಟ್ರೋಲ್‌ನವರು ತೆಗೆದುಕೊಂಡು ಹೋದರೆಂದು ಬಾತ್ಮಿ ಬಂತೆಂದೂ, ಸೀ ಪೆಟ್ರೋಲ್‌ನವರು ನಮಗೆ ನೋಟೀಸು ಮಾಡಲಿಲ್ಲವೆಂದೂ, ಮಾರನೆಯ ದಿವಸ ತನ್ನ ಮಾಲೀಕತ್ವದ ಬೋಟೆಂದು ತಿಳಿದು ತನಗೆ ಆರೋಪಿ ಮಾಡಿದರೆಂದೂ, ಆ ಕೇಸು ನಿರ್ದೋಷಿಯೆಂದು ಬಿಡುಗಡೆಯಾಗಿರುತ್ತದೆ. ವಾಹನವನ್ನು ಜಪ್ತಿಮಾಡಿದ ಬಗ್ಗೆ ಯಾವುದೇ ದಂಡಾಧಿಕಾರಿಯಿಂದ ಅನುಮತಿಯನ್ನು ಪಡೆದಿದ್ದರು ಎನ್ನುವ ಬಗ್ಗೆ ತನಗೆ ನೋಟೀಸು ಕೊಟ್ಟಿಲ್ಲವೆಂದೂ, ಬೋಟನ್ನು ಬ್ಯಾಂಕ್ ಗ್ಯಾರಂಟಿ ಕೊಟ್ಟು ಬಿಡಿಸಿಕೊಂಡು ಹೋಗಿರುತ್ತೇನೆಂದೂ, ತಾನು ಬೋಟನ್ನು ಬಿಟ್ಟು ಬಂದ ನಂತರ ಮಾರನೆಯ ದಿವಸ ತಾನು ಹೋಗುವವರೆಗೆ ಆ ಬೋಟಿನ ಸ್ಥಿತಿಯ ಬಗ್ಗೆ ತಾನು ನೋಡಿರಲಿಲ್ಲವೆಂದೂ, ಈ ಬೋಟನ್ನು ತಾನು ಕಳ್ಳ ಸರಾಯಿ ಸಾಗಾಟಕ್ಕೆ ಉಪಯೋಗಿಸಿರಲಿಲ್ಲವೆಂದೂ, ಈ ಕೇಸಿಗೂ ಮತ್ತು ತನ್ನ ಬೋಟಿಗೂ ಯಾವುದೇ ಸಂಬಂಧವಿರುವುದಿಲ್ಲವೆಂದೂ ಕಳ್ಳಸರಾಯಿಗಾಗಲೀ ತನ್ನ ಬೋಟಿಗಾಗಲೀ ಯಾವುದೇ ಸಂಬಂಧವಿರುವುದಿಲ್ಲವೆಂದೂ, ಸದರಿ ಬೋಟನ್ನು ಸಾಲ ಪಡೆದು ತಾನು ಖರೀದಿಸಿರುತ್ತೇನೆಂದು ನುಡಿದಿರುತ್ತಾರೆ. ನಂತರ ಮಾನ್ಯ ಎ.ಡಿ.ಪಿ. ಯವರ ಪಾಟಿ ಸವಾಲಿನಲ್ಲಿ ಬೋಟನ್ನು ನಾವೇ ನಡೆಸುತ್ತೇವೆಂದೂ, ಸದರಿ ಬೋಟು ನಮ್ಮ ಹೆಸರಿನಲ್ಲಿರುತ್ತದೆಂದೂ, ದಿನಾಂಕ: 1.12.1992 ರಂದು ಸಂಜೆ 4 ಗಂಟೆಗೆ ಸದರಿ ಬೋಟನ್ನು ತೆಗೆದುಕೊಂಡು ಹೋಗಿದ್ದೆನೆಂದೂ, ನಂತರ ಅದನ್ನು ನಾನೇ 9.00 ಗಂಟೆಗೆ ತಂದು ಸಮುದ್ರ ದಂಡೆಯ ಮೇಲೆ ಬಿಟ್ಟಿರುತ್ತೇನೆಂದೂ, ಆ ನಂತರ ಆ ಬೋಟನ್ನು ಯಾರೂ ಒಯ್ದಿರಲಿಲ್ಲ. ಒಯ್ಯಲಿಕ್ಕೂ ಬರುವುದಿಲ್ಲವೆಂದು ನುಡಿದಿರುತ್ತಾರೆ.

**ಇಲ್ಲಿ ಗಮನಿಸಬೇಕಾದ ಮುಖ್ಯ ಅಂಶವೇನೆಂದರೆ**

17. ಅರ್ಜಿದಾರರು ದಿನಾಂಕ: 3.4.1993 ರಂದು ಈ ಪ್ರಾಧಿಕಾರಕ್ಕೆ ಸಲ್ಲಿಸಿರುವ ಅಫಿಡವಿಟ್‌ನಲ್ಲಿ ಬೋಟನ್ನು ತನ್ನ ಸಹೋದರನ ಶೆಡ್‌ನಲ್ಲಿ ಇಟ್ಟಿದ್ದಾಗಿ ತಿಳಿಸಿದ್ದು, ಡಿ.ಡಬ್ಲ್ಯೂ-1 ರಲ್ಲಿ ದಾನು ಎಂಬುವವರ ಶೆಡ್‌ನಲ್ಲಿ ಇಟ್ಟಿರುವುದಾಗಿ ತಿಳಿಸಿರುತ್ತಾರೆ. ಡಿ.ಡಬ್ಲ್ಯೂ-1 ರಲ್ಲಿ ಶಂಕರ ಎಂಬುವರು ಯಾರು ಎಂಬುವುದು ತನಗೆ ಗೊತ್ತಿಲ್ಲವೆಂಬಂತೆ ಹೇಳಿಕೆ ನೀಡಿರುತ್ತಾರೆ. ಆದರೆ ಇವರು ದೋಣಿಯನ್ನು ಮಧ್ಯಂತರ ವಶಕ್ಕೆ ಪಡೆಯುವಾಗ ದೋಣಿಯೊಂದಿಗೆ ಶಂಕರ ಇವರ ಮಶೀನನ್ನು ಸಹಾ ತಾನೇ ಬಿಡಿಸಿಕೊಂಡು ಹೋಗಿರುತ್ತಾರೆ. ಅಂದಿನಿಂದ ಶಂಕರ ಆಗಲೀ ಅವರ ಪರ ವಕೀಲರಾಗಲೀ ಈ ಪ್ರಾಧಿಕಾರದಲ್ಲಿ ಒಮ್ಮೆಯೂ ಹಾಜರಾಗಿಲ್ಲ. ಇದರಿಂದಾಗಿ ಶಂಕರ ಇವರಿಗೂ ಮತ್ತು ಡಿ.ಡಬ್ಲ್ಯೂ-1 ರವರಿಗೂ ಪರಸ್ಪರ ಹೊಂದಾಣಿಕೆ ಇರುವುದು ಕಂಡುಬರುತ್ತದೆ. ಬೋಟನ್ನು ತೆಗೆದುಕೊಂಡು ಹೋದ ಮಾರನೆಯ ದಿನವೇ ಬೋಟು ಒಯ್ದ ಬಗ್ಗೆ ತನಗೆ ಗೊತ್ತಾಯಿತೆಂದು ಡಿ.ಡಬ್ಲ್ಯೂ-1 ರವರು ತಿಳಿಸಿರುತ್ತಾರೆ. ಆದರೆ ಅದರ ಬಿಡುಗಡೆಗಾಗಿ ನಾಲ್ಕು ತಿಂಗಳುಗಳ ನಂತರ ಅರ್ಜಿ ಸಲ್ಲಿಸಿರುತ್ತಾರೆ. ಇಷ್ಟು ದಿನಗಳ ವಿಳಂಬವಾಗಿ ಅರ್ಜಿಸಲ್ಲಿಸಿದ ಬಗ್ಗೆ ಡಿ.ಡಬ್ಲ್ಯೂ-1 ರವರು ಯಾವುದೇ ವಿವರಣೆ ನೀಡಿರುವುದಿಲ್ಲ. ಮಾನ್ಯ ಎ.ಡಿ.ಪಿ. ಯವರ ಪಾಟೀ ಸವಾಲಿನಲ್ಲಿ ಬೋಟನ್ನು ಯಾರೂ ಒಯ್ದಿರಲಿಲ್ಲ, ಒಯ್ಯುಲಿಕ್ಕೂ ಬರುವುದಿಲ್ಲವೆಂದು ಡಿ.ಡಬ್ಲ್ಯೂ-1 ರವರು ನುಡಿದಿದ್ದು, ಹಾಗಿದ್ದಾಗ ಪೊಲೀಸರು ಸದರಿ ಬೋಟನ್ನು ಏಕೆ ಮತ್ತು ಹೇಗೆ ಒಯ್ದರೆನ್ನುವ ಬಗ್ಗೆ ವಿವರಿಸಿರುವುದಿಲ್ಲ. ದಿನಾಂಕ: 30.12.1992 ರಂದು ಮಶೀನಿನ ಮಾಲೀಕರಾದ ಶಂಕರ ನಾರಾಯಣ ಬೊಬ್ರುಕರ್ ಇವರು ಸದರಿ ಮಶೀನನ್ನು ಸಹ ಬಿಣಗಾದ ತನ್ನ ಮಾವನವರ ಶೆಡ್‌ನಲ್ಲಿಯೇ ಇಟ್ಟಿರುವ ಬಗ್ಗೆ ಒಪ್ಪಿಕೊಂಡಿರುತ್ತಾರೆ. ಅಲ್ಲದೇ ಬಿಣಗಾದ ಕೆಲವು ಪಾತಕಿಗಳು ಗೋವಾ ರಾಜ್ಯದ ಮದ್ಯವನ್ನು ಕಳ್ಳಸಾಗಾಣಿಕೆ ಮಾಡುವ ಬಗ್ಗೆಯೂ ಸಹ ಒಪ್ಪಿಕೊಂಡಿರುತ್ತಾರೆ. ಆದರೆ ಇವರುಗಳು ಸದರಿ ತಮಗೆ ಸಂಬಂಧಿಸಿದ ವಾಹನವನ್ನು ತಮಗೆ ತಿಳಿಯದೇ ಮತ್ತು ತಾವುಗಳು ಈ ಪ್ರಕರಣದಲ್ಲಿ ಶಾಮೀಲಾಗದೇ ಈ ಘಟನೆ ಸಂಭವಿಸಿದೆ ಎಂಬುದರ ಬಗ್ಗೆ ತೃಪ್ತಿಕರವಾಗಿ ಉತ್ತರವನ್ನು ನೀಡಿರುವುದಿಲ್ಲ. ಅಲ್ಲದೇ ಈ ರೀತಿ ಬೇರೆಯವರು ವಾಹನವನ್ನು ಅಕ್ರಮ ಮದ್ಯ ಸಾಗಾಣಿಕೆಗಾಗಿ ಬಳಸಬಾರದುದಕ್ಕಾಗಿ ತೆಗೆದುಕೊಂಡಿದ್ದಂತಹ ಮುಂಜಾಗ್ರತಾ ಕ್ರಮಗಳ ಬಗ್ಗೆಯೂ ಸಹ ವಿವರಿಸಿರುವುದಿಲ್ಲ.

**ಮೂರನೇಯ ವಿವಾದಾಂಶ**

18. ಮೊದಲನೆಯ ಮತ್ತು ಎರಡನೆಯ ವಿವಾದಾಂಶದಿಂದ ಪಡೆದ ಉತ್ತರದಿಂದಾಗಿ ಮತ್ತು ಮಾನ್ಯ ಉಚ್ಚ ನ್ಯಾಯಾಲಯದ ಮೇಲ್ಕಾಣಿಸಿದ ತೀರ್ಪನ್ನು ಗಮನದಲ್ಲಿಟ್ಟುಕೊಂಡು ಈ ಪ್ರಕರಣದಲ್ಲಿ ಜಪ್ತಿ ಮಾಡಲ್ಪಟ್ಟ ಬೋಟಿನಲ್ಲಿ ಗೋವಾ ಮದ್ಯ ಮತ್ತು ಫೆನ್ನಿಯನ್ನು

ಮಶೀನು ಹೊಂದಿದಂತಹ ದೋಣಿಯ ಚಾಲಕ ಹಾಗೂ ಅದರ ಪ್ರಭಾರವನ್ನು ಹೊಂದಿದಂತಹ ಇತರರು ಮತ್ತು ಅವುಗಳ ಮಾಲೀಕರು ಶಾಮೀಲಾಗಿ ಅಕ್ರಮವಾಗಿ ಸಾಗಿಸಿರುವುದು ಸಾಬೀತಾಗಿರುವುದರಿಂದ ಸದರಿ ದೋಣಿ ಹಾಗೂ ಮಶೀನನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುವುದರಿಂದ ಈ ಕೆಳಗಿನಂತೆ.

**ಆದೇಶ**

ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43 ಎ(1)ರಲ್ಲಿ ನನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕಾರವಾರ ಗ್ರಾಮೀಣ ಪೊಲೀಸ್ ಠಾಣೆಯ ಗುನ್ನೆ ಸಂಖ್ಯೆ: 131/1992 ದಿನಾಂಕ: 2.12.1992 ರಲ್ಲಿ ಜಪ್ತಾದ ನಾಡದೋಣಿ ಹಾಗೂ ಯಮಹಾ 25 ಎಚ್.ಪಿ. ಮಶೀನು ಸಂಖ್ಯೆ: ಇ-25 ಎಫ್‌ಕೆ-6 ಎಎಚ್‌ಎಲ್‌ಬಿ-11377 ನೇದನ್ನು ಕಲಂ 43ಎ(2) ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿ ಆದೇಶಿಸಿದ್ದೇನೆ.

ಈ ಪ್ರಾಧಿಕಾರದ ಮಧ್ಯಂತರ ಆದೇಶ ಸಂಖ್ಯೆ: ಅಬಕಾರಿ/ಸಿಆರ್‌ಎಂ/ಡಿಟಿಸಿಆರ್/138/92-93, ದಿನಾಂಕ: 31.01.1996 ನೇದನ್ನು ಈ ಮೂಲಕ ಹಿಂತೆಗೆದುಕೊಂಡಿರುತ್ತೇನೆ.

(ಈ ಆದೇಶವನ್ನು ಇಂದು ಅಂದರೆ 2004ನೇ ಇಸವಿಯ ಜುಲೈ ತಿಂಗಳ 28ನೇ ತಾರೀಖಿನಂದು ವಿಷಯನಿರ್ವಾಹಕರಿಗೆ ಉಕ್ತಲೇಖನ ನೀಡಿ ನಂತರ ಗಣಕೀಕೃತಗೊಳಿಸಿ. ಪ್ರಾಧಿಕಾರದ ಸೀಲ್ ಮೊಹರಿನೊಂದಿಗೆ ಹೊರಡಿಸಲಾಗಿದೆ).

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಅಮಲಿಗೆ ಬರುವುದು.

**ಕೆ. ಸಿ. ಹರಿದಾಸ್**
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್
ಎಕ್ಸೈಜ್, ಉತ್ತರ ಕನ್ನಡ ಜಿಲ್ಲೆ, ಕಾರವಾರ.

**ಅನುಬಂಧ-1**

**(ಪ್ರಾಸಿಕ್ಯೂಷನ್ ಪರ ಸಾಕ್ಷಿದಾರರ ಪಟ್ಟಿ)**

ಪ್ರಾ.ಸಾ.ನಂ.1: ಎನ್. ಅಪ್ಪುಶೆಟ್ಟಿ, ಪಿ.ಎಸ್.ಐ

**ಅನುಬಂಧ-2**

**(ಎದುರುದಾರರ ಪರ ಸಾಕ್ಷಿದಾರರ ಪಟ್ಟಿ)**

ಡಿ.ಡಬ್ಲ್ಯೂ ನಂ.1 : ಕೃಷ್ಣಾಲಿಂಗಾ ಹರಿಕಂತ್ರ

**ಅನುಬಂಧ-3**

**(ಪ್ರಾಸಿಕ್ಯೂಷನ್ ಪರ ಗುರ್ತಿಸಲಾದ ದಾಖಲೆಗಳು)**

ನಿಶಾನೆ ಪಿ 1 : ಫಿರ್ಯಾದು
ನಿಶಾನೆ ಪಿ 2 : ಪಂಚನಾಮೆ
ನಿಶಾನೆ ಪಿ 3 : ರಾಸಾಯನಿಕ ವಿಶ್ಲೇಷಣಾ ವರದಿ

**ಅನುಬಂಧ-4**

**(ಎದುರುದಾರರ ಪರ ಗುರ್ತಿಸಲಾದ ದಾಖಲೆಗಳು)**

-ಇಲ್ಲಾ-

**ಅನುಬಂಧ-5**

**(ಅಭಿಯೋಜಕರ ಪರ ಗುರ್ತಿಸಲಾದ ಮುದ್ದೆಮಾಲುಗಳು)**

ಮು.ಮಾ-1- ನಾಡದೋಣಿ
ಮು.ಮಾ-2-ಯಮಹಾ ಮಶೀನು

**ಕೆ. ಸಿ. ಹರಿದಾಸ್**
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್
ಎಕ್ಸೈಜ್, ಉತ್ತರ ಕನ್ನಡ ಜಿಲ್ಲೆ, ಕಾರವಾರ.

ಪಿ.ಆರ್.1137

**IN THE COURT OF COMMISSIONER FOR WORKMEN'S COMPENSATION, BIDAR**
**No:LOB/WCA/CR-33/2004**

**Applicants:** V/s **Respondents:**

1. Anita W/o Raju @ Jairaj Singh Thakur Age 26 years Occ: Household, R/o Ladha Now at Bowagi, Taluk Bidar and 4 Others

**Respondents:**

1. Gurubej Singh H. Rajput, Age: Major, Occ: Business, R/o No. 119, Jogupalya, Bangalore.
2. Oriental Insurance Co. Ltd., Pune, through D.M. Oriental Insurance. Co. Ltd., Gulbarga.

**PROCLAMATION**

Sri/Smt. Anita W/o Raju @ Jairaj Singh Thakur W/o F/o. S/o Raju @ Jairaj Singh Thakur R/o Ladha Now at Bowagi Tq Bidar have/ has filed application in this court claiming compensation stating that Late: Raju @ Jairaj Singh Thakur was Working as Driver Under the Respondent No. R-I he met with an accident arising out of and during the Course of employment as a result he died on 19.2.2003.

Wherefore, it is hereby notified for the information of these concerned that other dependents if any may file their claim application and objections within 30 days from the date of publication of this proclamation, if no applications or objections are received within the specified date the court will proceeded further in the matter.

Commissioner for Workmen's Compensation, Bidar.

PR-1139

**IN THE COURT OF COMMISSIONER FOR WORKMEN'S COMPENSATION, BIDAR**
**No:LOB/WCA/CR-34/2004**

**Applicants:** V/s **Respondents:**

1. Sharnamma W/o Late Mallappa, Age Major, Occ: Household, R/o Village Ladgeri, Bidar and 4 Others.

V/s

1. Shankarappa, S/o Veerabasappa. Age. Major, Occ: Lorry owner, R/o H. No. 7-2, 88, Chitralekha Talkies Road, Bidar.
2. Oriental Insurance Co. Ltd., Gulbarga.

**PROCLAMATION**

Sri/Smt. Sharnamma W/o Late Mallappa R/o Village Ladgeri, Bidar have/has filed application in this court claiming compensation stating that Late: Rajkumar was working as Driver Under the Respondent No. R-I he met with an accident arising out of and during the course of employment as a result he died on 12.4.2004

Wherefore, it is hereby notified for the information of these concerned that other dependents if any may file their claim application and objections within 30 days from the date of publication of this proclamation, if no applications or objections are received within the specified date the court will proceeded further in the matter.

PR-1140 Commissioner for Workmen's Compensation, Bidar.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಕೊಡಗು ಜಿಲ್ಲೆ, ಮಡಿಕೇರಿ**

**ಸಂಖ್ಯೆ: ಕಾಅಮ:ಕಾನಪ:ಸಿಆರ್:8:2003 ದಿನಾಂಕ: 29ನೇ ಜುಲೈ 2004**

**ಅರ್ಜಿದಾರರು** ವಿರುದ್ಧ **ಪ್ರತಿವಾದಿ**

1. ಶ್ರೀಮತಿ ಕಮಲ, ಕೋಂ: ಲೇಟ್ ತೋಮಸ, ಹರದೂರು ವಿಲೇಜ್, ಸುಂಟಿಕೊಪ್ಪ.

ವಿರುದ್ಧ

1. ರಾಜೇಂದ್ರ ಕುಮಾರ್, ಮಾಲೀಕರು, ಮುತ್ತಿನ ತೋಟ, ಹರದೂರು ವಿಲೇಜ್, ಸುಂಟಿಕೊಪ್ಪ.

**ಅಧಿಸೂಚನೆ**

ಸಾರ್ವಜನಿಕರಿಗೆ ಹಾಗೂ ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ ಶ್ರೀ ಸೋಮಪ್ಪ, ಕಾರ್ಮಿಕ, ಮುತ್ತಿನ ತೋಟ, ಹರದೂರು ಇಲ್ಲಿ ಕೆಲಸ ಮಾಡುತ್ತಿದ್ದಾಗ ಹಾವು ಕಡಿದು ದಿನಾಂಕ: 16.1.2003 ರಂದು ಮರಣ ಹೊಂದಿರುತ್ತಾರೆ. ಈ ಬಾಬತ್ತು ಕಾರ್ಮಿಕ ನಷ್ಟ ಪರಿಹಾರಕ್ಕಾಗಿ ದಿವಂಗತ ಸೋಮಪ್ಪ ಇವರ ಪತ್ನಿ ಶ್ರೀಮತಿ ಕಮಲ ಇವರು ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ.

ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಹಾಗೂ ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ಯಾರಾದರೂ ಮೃತನ ನಿಜವಾದ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆಯು ಈ ನ್ಯಾಯಾಲಯದ ನಾಮಫಲಕದಲ್ಲಿ ಅಥವಾ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳ ಒಳಗಾಗಿ ಆಕ್ಷೇಪಣೆಗಳನ್ನಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದು. ಮೇಲೆ ನಿಗಧಿಪಡಿಸಿದ ಅವಧಿಯ ನಂತರ ಬರುವ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯಾಗಲೀ ಬಂದಲ್ಲಿ ಅವುಗಳನ್ನು ಪರಿಗಣಿಸಲಾಗುವುದಿಲ್ಲ.

ಪಿ.ಆರ್.1141 ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಮಡಿಕೇರಿ.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಕೊಡಗು ಜಿಲ್ಲೆ, ಮಡಿಕೇರಿ**

**ಸಂಖ್ಯೆ: ಕಾಅಮ:ಕಾನಪ:ಸಿಆರ್:12:2004 ದಿನಾಂಕ: 29ನೇ ಜುಲೈ 2004**

**ಅರ್ಜಿದಾರರು** ವಿರುದ್ಧ **ಪ್ರತಿವಾದಿ**

1. ಶ್ರೀಮತಿ ವೇದಾವತಿ, ದಿವಂಗತ ಎಂ. ಬಸವರಾಜು ರವರ ಪತ್ನಿ, ಶನಿವಾರಸಂತೆ, ಕುಶಾಲನಗರ ಸಬ್ ಡಿವಿಜನ್

ವಿರುದ್ಧ

1. ಎಕ್ಸಿಕ್ಯೂಟಿವ್ ಇಂಜಿನೀಯರ್, ಮಂಗಳೂರು ಎಲೆಕ್ಟ್ರಿಸಿಟಿ ಸಪ್ಲೈ ಕಂ. ಲಿ., ಮಡಿಕೇರಿ.

**ಅಧಿಸೂಚನೆ**

ಸಾರ್ವಜನಿಕರಿಗೆ ಹಾಗೂ ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ ಶ್ರೀ ಎಂ. ಬಸವರಾಜು, ಮಂಗಳೂರು ಎಲೆಕ್ಟ್ರಿಸಿಟಿ ಕಂ. ಲಿ., ಶನಿವಾರಸಂತೆಯಲ್ಲಿ ಕೆಲಸ ಮಾಡುತ್ತಿರುವ ಸಂದರ್ಭದಲ್ಲಿ ವಿದ್ಯುತ್ ತಗಲಿ ದಿನಾಂಕ: 18.5.2004 ರಂದು ಮರಣ

ಹೊಂದಿದ ಪ್ರಯುಕ್ತ ಮಂಗಳೂರು ಎಲೆಕ್ಟ್ರಿಸಿಟಿ ಸಪ್ಲೈ ಕಂಪೆನಿಯವರು ರೂ. 1,01,660-00 (ರೂಪಾಯಿ ಒಂದು ಲಕ್ಷದ ಒಂದು ಸಾವಿರದ ಆರುನೂರ ಅರವತ್ತು ಮಾತ್ರ) ಗಳನ್ನು ಈ ನ್ಯಾಯಾಲಯದಲ್ಲಿ ಠೇವಣಿ ಮಾಡಿರುತ್ತಾರೆ.

ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಹಾಗೂ ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ಯಾರಾದರೂ ಮೃತನ ನಿಜವಾದ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥಹವರು ಈ ಪ್ರಕಟಣೆಯು ಈ ನ್ಯಾಯಾಲಯದ ನಾಮ ಫಲಕದಲ್ಲಿ ಅಥವಾ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳ ಒಳಗಾಗಿ ಆಕ್ಷೇಪಣೆಗಳನ್ನಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದು. ಮೇಲೆ ನಿಗದಿಪಡಿಸಿದ ಅವಧಿಯ ನಂತರ ಬರುವ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯಾಗಲೀ ಬಂದಲ್ಲಿ ಅವುಗಳನ್ನು ಪರಿಗಣಿಸಲಾಗುವುದಿಲ್ಲ.

ಪಿ. ಸಣ್ಣಪ್ಪಯ್ಯ
ಪಿ.ಆರ್.1142 ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ
ಆಯುಕ್ತರು, ಕೊಡಗು ಜಿಲ್ಲೆ, ಮಡಿಕೇರಿ.

## OFFICE OF THE COMMERCIAL TAX OFFICER, XVI CIRCLE, GANDHINAGAR, B'LORE.

**Sub :** Loss of KST Receipt Book No. 039992 and Invalidation of unused receipt No's 1999567 to 1999600-Reg.,

It is brought to the notice of all those concerned that this office has issued Receipt Book bearing No. 039992 which consists of 50 leaves in duplicate, to the Commercial Tax Inspector of this office on 21.9.02, from receipt No. 1999551 to 1999600. The receipt Nos 1999551 to 1999566 has been utilised and the receipt No. 1999567 to 1999600 (34 leaves in duplicate)being unused and the Commercial Tax Inspector of this Office has reported that, she has lost the receipt book on 28.2.04 while on duty in the area. To that effect a complaint has been lodged in the Wilson Garden Police Station on 28.2.04 at 21 hours and wide publicity in daily news papers, like Kannadaprabha, Prajavani, and Sanjevani is given on 2.3.04.

The above said unused receipts of 34 leaves in duplicate will not have any value as the undersigned has declared that the said receipts as obsolete. If any body finds the above receipt book may surrender the same to the undersigned. The details are as follows:

| | | | |
|---|---|---|---|
| 1. | Assessing Authority | : | Commercial Tax Officer, 16th Circle, No. 107, II Floor, Amar Towers, Gandhinagar, Bangalore-9. |
| 2. | Description | : | KST Receipt Book No. 039992 consisting 50 leaves in Duplicate bearing No.s 1999551 to 1999600 |
| 3. | Printed Sl. No. of the Receipt | : | 1999567 to 1999600 |
| 4. | Official to whom it was issued. | : | Commercial Tax Inspector O/o CTO, 16th Circle, B'lore |
| 5. | Date of loss of receipt book | : | 28.2.2004 |
| 6. | Date of reporting to that effect in this Office | : | 02.03.2004 |
| 7. | Action already initiated in this office | : | Published in daily news papers;<br>(i) Kannadaprabha on 2.3.04<br>(ii) Prajavani on 2.03.04<br>(iii) Sanjevani on 02.03.04 |
| 8. | How Lost | : | The Commercial Tax Inspector was on Official duty in the area when she lost. To that effect complaint has been filed in Wilson Garden Police Station on 28.02.04. |

**P. RANGASWAMY**
PR-1143 Commercial Tax Officer, 16th Circle, Bangalore-9.

## ಮಾನ್ಯ 11ನೇ ಎಸಿಎಂಎಂ ನ್ಯಾಯಾಲಯದ ಸನ್ನಿಧಾನದಲ್ಲಿ, ಬೆಂಗಳೂರು

### ಪ್ರಕಟಣೆ

ಈ ಕೆಳಗೆ ತೋರಿಸಿದ ವಾಹನಗಳ ನಿಜವಾದ ಮಾಲೀಕರು ಬಂದು ಕ್ಲೇಮು ಮಾಡಿರುವುದಿಲ್ಲ. ಕಾರಣ ಸದರಿ ವಾಹನಗಳ ನಿಜವಾದ ಮಾಲೀಕರು ಇದ್ದಲ್ಲಿ, ಈ ಪ್ರಕಟಣೆ ಆದ 6 ತಿಂಗಳ ಒಳಗಾಗಿ ಮೂಲ ಕಾಗದ ಪತ್ರಗಳ ದಾಖಲೆಗಳನ್ನು ಹಾಜರುಪಡಿಸಿ, ಮಾನ್ಯ 11ನೇ ಎಸಿಎಂಎಂ ನ್ಯಾಯಾಲಯದ ನ್ಯಾಯಾಧೀಶರಿಗೆ ಅರ್ಜಿ ಸಲ್ಲಿಸತಕ್ಕದ್ದು. ತಪ್ಪಿದಲ್ಲಿ ಕಾನೂನಿನಂತೆ ಕ್ರಮ ಜರುಗಿಸಲಾಗುವುದು.

| ಕ್ರ.ಸಂ. | ಕೇಸ್ ನಂ. | ವಾಹನ ಸಂಖ್ಯೆ | ಮಾಡೆಲ್ |
|---|---|---|---|
| 1. | ಅಶೋಕನಗರ ಪೊಲೀಸ್ ಠಾಣೆ, ಸಿಮಿಸ್ ನಂ. 109/04 | ಸಿಎವಿ-3473 | ಟಿಎಫ್‌ಆರ್ ಲೂನಾ- ಚಾಸಿ ನಂ. 5006021 ಇಂಜಿನ್ ನಂ- ಇಲ್ಲ. |
| 2. | ಅಶೋಕನಗರ ಪೊಲೀಸ್ ಠಾಣೆ, ಸಿಮಿಸ್ ನಂ. 109/04 | ಎಂಇಟಿ-1222 | ವಿಜಯ್ ಸೂಪರ್ ಚಾಸಿ ನಂ. 220-00-051941 ಇಂಜಿನ್ ನಂ-ಇಲ್ಲ |

| ಕ್ರ.ಸಂ. | ಕೇಸ್ ನಂ. | ವಾಹನ ಸಂಖ್ಯೆ | ಮಾಡೆಲ್ |
|---|---|---|---|
| 3. | ಅಶೋಕನಗರ ಪೊಲೀಸ್ ಠಾಣೆ, ಸಿಮಿಸ್ ನಂ. 109/04 | ಎಂಇಇ-3940 | ವೆಸ್ಪಾ ಸ್ಕೂಟರ್ ಚಾಸಿ ನಂ-ಇಲ್ಲ ಇಂಜಿನ್ ನಂ.ವಿ-402-ಐಐಎಂ-7583 |
| 4. | ಅಶೋಕನಗರ ಪೊಲೀಸ್ ಠಾಣೆ, ಸಿಮಿಸ್ ನಂ. 109/04 | ಕೆಎ-02-ಸಿ-4216 | ಹೀರೊಪುಕ್ ಚಾಸಿ ನಂ. ಸಿಬಿ-28-9953 ಇಂಜಿನ್ ನಂ. ಸಿಬಿ-283896 |
| 5. | ಅಶೋಕನಗರ ಪೊಲೀಸ್ ಠಾಣೆ, ಸಿಮಿಸ್ ನಂ. 109/04 | ಸಿಕೆಜೆ-8731 | ಟಿವಿಎಸ್-50 ಚಾಸಿ ನಂ. 152252 ಇಂಜಿನ್ ನಂ-ಇಲ್ಲ |
| 6. | ಅಶೋಕನಗರ ಪೊಲೀಸ್ ಠಾಣೆ, ಸಿಮಿಸ್ ನಂ. 109/04 | ಕೆಎ-01-ಕೆ-3431 | ಹೀರೊಪುಕ್ ಚಾಸಿ ನಂ. ಎಂಡಿ-316 ಇಐಬಿಆರ್ಎಸ್ಸಿ-345239 ಇಂಜಿನ್ ನಂ. ಇಬಿ-342676 |
| 7. | ಅಶೋಕನಗರ ಪೊಲೀಸ್ ಠಾಣೆ, ಸಿಮಿಸ್ ನಂ. 109/04 | ಎಂಇಆರ್-128 | ಲೂನಾ ಚಾಸಿ ನಂ. ಇಲ್ಲ ಇಂಜಿನ್ ನಂ.11020943 |
| 8. | ಅಶೋಕನಗರ ಪೊಲೀಸ್ ಠಾಣೆ, ಸಿಮಿಸ್ ನಂ. 109/04 | ಕೆಎ-01-ಜೆ-89 | ವೆಸ್ಪಾಸ್ಕೂಟರ್ ಚಾಸಿ ನಂ-ಇಲ್ಲ ಇಂಜಿನ್ ನಂ. 024258 |
| 9. | ಅಶೋಕನಗರ ಪೊಲೀಸ್ ಠಾಣೆ, ಸಿಮಿಸ್ ನಂ. 109/04 | ಸಿಕೆಐ-6678 | ಹೀರೋಹೊಂಡಾ ಚಾಸಿ ನಂ. ಇಲ್ಲ ಇಂಜಿನ್ ನಂ. ಹೆಚ್-10 ಇ-624771 |
| 10. | ಅಶೋಕನಗರ ಪೊಲೀಸ್ ಠಾಣೆ, ಸಿಮಿಸ್ ನಂ. 109/04 | ಎಂಈಜಿ-3463 | ವಿಜಯ್ ಸೂಪರ್ ಚಾಸಿ ನಂ. 100133 ಇಂಜಿನ್ ನಂ. 153889 |
| 11. | ಅಶೋಕನಗರ ಪೊಲೀಸ್ ಠಾಣೆ, ಸಿಮಿಸ್ ನಂ. 109/04 | ಎಂಟಿಎಸ್-2392 | ಬಜಾಜ್ ಚೇತಕ್ ಚಾಸಿ ನಂ. ಹೆಚ್ 06-ಸಿ-112893 ಇಂಜಿನ್ ನಂ. 06ಇ-11830 |
| 12. | ಅಶೋಕನಗರ ಪೊಲೀಸ್ ಠಾಣೆ, ಸಿಮಿಸ್ ನಂ. 109/04 | ಕೆಎ-05-ಹೆಚ್-6624 | ಹೀರೊ ಪುಕ್ ಚಾಸಿ ನಂ. ಎಂ.0396-ಜಿ2 ಬಿಆರ್-1ಸಿ452238 ಇಂಜಿನ್ ನಂ. 1ಎಎ007 |
| 13. | ಅಶೋಕನಗರ ಪೊಲೀಸ್ ಠಾಣೆ, ಸಿಮಿಸ್ ನಂ. 109/04 | ಸಿಎಇ-1237 | ಟಿವಿಎಸ್-50 ಚಾಸಿ ನಂ. ಇಲ್ಲ ಇಂಜಿನ್ ನಂ. 20060781 |
| 14. | ಅಶೋಕನಗರ ಪೊಲೀಸ್ ಠಾಣೆ, ಸಿಮಿಸ್ ನಂ. 109/04 | ನಂ. ಇಲ್ಲ | ಲೂನಾ ಚಾಸಿ ನಂ. ಇಲ್ಲ ಇಂಜಿನ್ ನಂ. 46004136 |
| 15. | ಅಶೋಕನಗರ ಪೊಲೀಸ್ ಠಾಣೆ, ಸಿಮಿಸ್ ನಂ. 109/04 | ಸಿಕೆಜೆ-7563 | ಟಿವಿಎಸ್-50 ಚಾಸಿ ನಂ. ವಿ-210041187 ಇಂಜಿನ್ ನಂ. ವಿ2-12121187 |
| 16. | ಅಶೋಕನಗರ ಪೊಲೀಸ್ ಠಾಣೆ, ಸಿಮಿಸ್ ನಂ. 109/04 | ಸಿಕೆಆರ್-679 | ಟಿಎಫ್ಆರ್ ಲೂನಾ ಚಾಸಿ ನಂ. ಇಲ್ಲ ಇಂಜಿನ್ ನಂ. ಕೆಇ-744211 |
| 17. | ಅಶೋಕನಗರ ಪೊಲೀಸ್ ಠಾಣೆ, ಸಿಮಿಸ್ ನಂ. 109/04 | ಸಿಕೆಆರ್-12-ಕೆ-6127 | ಟಿವಿಎಸ್ ಚಾಂಪ್ ಚಾಸಿ ನಂ. ಡಿ-108 ಎಫ್-21113 ಇಂಜಿನ್ ನಂ. ಇಲ್ಲ |
| 18. | ಅಶೋಕನಗರ ಪೊಲೀಸ್ ಠಾಣೆ, ಸಿಮಿಸ್ ನಂ. 109/04 | ಟಿಎನ್-29-ಕ್ಯೂ- 7441 | ಟಿವಿಎಸ್-50 ಚಾಸಿ ನಂ. ಎ2-10ಎಫ್-733530 ಇಂಜಿನ್ ನಂ. ಇಲ್ಲ |
| 19. | ಅಶೋಕನಗರ ಪೊಲೀಸ್ ಠಾಣೆ, ಸಿಮಿಸ್ ನಂ. 109/04 | ಕೆಎ-11-ಇ-8731 | ಎಚ್ಡಿ ಚಾಸಿ ನಂ. 11ಸಿ-078378 ಇಂಜಿನ್ ನಂ.1ಜೆಸಿ-250008747 |
| 20. | ಅಶೋಕನಗರ ಪೊಲೀಸ್ ಠಾಣೆ, ಸಿಮಿಸ್ ನಂ. 109/04 | ಕೆಎ-09-ಜೆ-8616 | ಟಿವಿಎಸ್-50 ಚಾಸಿ ನಂ. ಎ 402-ಎಫ್ 861163 ಇಂಜಿನ್ ನಂ. ಇಲ್ಲ. |
| 21. | ಅಶೋಕನಗರ ಪೊಲೀಸ್ ಠಾಣೆ, ಸಿಮಿಸ್ ನಂ. 109/04 | ಕೆಎ-04-ಆರ್-1445 | ಸುಜುಕಿ ಸಮುರಾಯ್ ಚಾಸಿ ನಂ. 7606 ಎಫ್-646785 ಇಂಜಿನ್ ನಂ. 7606 ಎಂ-691665 |

**ಎಸ್. ಎಸ್. ಸಿಂಧಗಿ**

ಪಿ.ಆರ್. 1113

11ನೇ ಎಸಿಎಂಎಂ ನ್ಯಾಯಾಲಯದ ನ್ಯಾಯಾಧೀಶರು,
ಮೇಯೋಹಾಲ್, ಬೆಂಗಳೂರು.